ವಿತಾಲಿ ಬಿಯಾಂಕಿ

# ಕಾಡಿನ ಮನೆಗಳು

ಚಿತ್ರಗಳು: ಮಾಯ್ ಮಿತೂರಿಚ್
ಅನುವಾದ: ಕೆ.ಎಲ್. ಗೋಪಾಲಕೃಷ್ಣರಾವ್




ರಾದುಗ ಪ್ರಕಾಶನ
ಮಾಸ್ಕೋ


ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.
ಬೆಂಗಳೂರು

# ಪರಿವಿಡಿ


ಕಾಡಿನ ಮನೆಗಳು 5





ಕೆಂಪು ಗುಡ್ಡ 18

ಮನೆಗೆ
ಧಾವಿಸಿದ ಇರುವೆ 32





ಮೊದಲ ಬೇಟೆ 43



# ಕಾಡಿನ ಮನೆಗಳು

ನದಿಯ ಮೇಲೆ, ಕೋಡುಗಲ್ಲಿಗೂ ಮೇಲೆ, ಎತ್ತರದಲ್ಲಿ ಎಳೆಯ ಸ್ವಾಲೋ ಹಕ್ಕಿಗಳು ಅತ್ತಿಂದಿತ್ತ ಜಿಗಿಯುತ್ತಿದ್ದವು, ಒಂದನ್ನೊಂದು ಅಟ್ಟಿಸಿಕೊಂಡು ಹೋಗುತ್ತಿದ್ದವು, ಕೀರು ಧ್ವನಿಯಲ್ಲಿ ಕೂಗುತ್ತ, ಚಿಲಿಪಿಲಿಗುಟ್ಟುತ್ತ, ಹಾರಾಡುತ್ತಿದ್ದವು. ಅವು ಗಾಳಿಯಲ್ಲಿ ಜೂಟಾಟ ಆಡುತ್ತಿದ್ದವು.

ಅವುಗಳ ಮಧ್ಯೆ ಒಂದು ಪುಟ್ಟ ಹಕ್ಕಿ ಇತ್ತು. ಅದು ಎಷ್ಟು ಚುರುಕಾಗಿ ಹಾರಾಡುತ್ತಿದ್ದಿತೆಂದರೆ ಯಾರಿಗೂ ಅದನ್ನು ಹಿಡಿಯಲು ಸಾಧ್ಯವೇ ಇರಲಿಲ್ಲ. ಇನ್ನೇನು ಸಿಕ್ಕಿತೆನ್ನುವಾಗ ಅದು ತಕ್ಷಣವೇ ಕೆಳಕ್ಕೆ ಮುಳುಗುತ್ತಿತ್ತು, ಇಲ್ಲವೇ ಪಕ್ಕಕ್ಕೆ ನುಸುಳಿ ತಪ್ಪಿಸಿಕೊಳ್ಳುತ್ತಿತ್ತು.

ಹಿಡಿಯಬೇಕಾದ ಹಕ್ಕಿ ಯಾವುದೇ ಆಗಲಿ ಅದು ಮೊದಲು ಈ ಪುಟ್ಟ ಸ್ವಾಲೋ ಹಕ್ಕಿಯನ್ನೇ ಅಟ್ಟಿಸಿಕೊಂಡು ಹೋಗುತ್ತಿತ್ತು. ಈ ಪುಟ್ಟ ಹಕ್ಕಿಯಾದರೋ ಇಲ್ಲಿ ಅಲ್ಲಿ ಮೇಲೆ ಕೆಳಗೆ ಎಷ್ಟು ಬೇಗ ಹಾರಾಡುತ್ತಿದ್ದಿತೆಂದರೆ ಅದರ ರೆಕ್ಕೆಗಳು ಒಂದು ಕ್ಷಣವೂ ಚಲಿಸದೆ ಇದ್ದಂತೆ ಕಂಡುಬರುತ್ತಿರಲಿಲ್ಲ.

ಆಗ ಇದ್ದಕ್ಕಿದ್ದಂತೆ ನೀಲಿ ಆಕಾಶದಲ್ಲಿ ಒಂದು ಗಿಡುಗ ಪಕ್ಷಿ ಕಾಣಿಸಿಕೊಂಡಿತು. ಕಡಿದಾಗಿ ಬಾಗಿದ್ದ ಅದರ ರೆಕ್ಕೆಗಳ ಪುಕ್ಕಗಳ ಮೂಲಕ ಗಾಳಿ ಶಿಳ್ಳೆ ಹಾಕುತ್ತಿತ್ತು.

ಸ್ವಾಲೋ ಹಕ್ಕಿಗಳು ಗಾಬರಿಗೊಂಡವು. ಅವು ತಕ್ಷಣವೇ ಚೆದುರಿದವು, ದಿಕ್ಕಾಪಾಲಾಗಿ ಹಾರಿ ಹೋದವು. ಕಣ್ಣು ಮಿಟುಕಿಸುವಷ್ಟರಲ್ಲಿ ಎಲ್ಲ ಮಾಯವಾಗಿದ್ದವು.



ಪುಟ್ಟ ಸ್ವಾಲೋ ಹಕ್ಕಿಯೂ ಅಷ್ಟೆ, ಒಂದು ಕ್ಷಣವೂ ಹಿಂದೆ ತಿರುಗಿ ನೋಡದೆ ನದಿಯ ಮೇಲೆ, ಕಾಡಿನ ಮೇಲೆ, ಅದರಾಚೆ ಇದ್ದ ಸರೋವರದ ಮೇಲೂ ಬೇಗಬೇಗ ಹಾರಿ ಹೋಯಿತು.

ಗಿಡುಗನ ಜೊತೆಗೆ ಜೂಟಾಟ ಆಡುವುದು ಸಾಧ್ಯವೇ? ಅದೊಂದು ಅತ್ಯಂತ ಅಪಾಯಕಾರಿ ಪಕ್ಷಿ.

ಪುಟ್ಟ ಸ್ವಾಲೋ ಹಕ್ಕಿ ಹೀಗೆ ಹಾರುತ್ತ ಹಾರುತ್ತಲೇ ಹೋಯಿತು – ಕೊನೆಗೆ ಹಾರಲು ಇನ್ನೆಷ್ಟು ಮಾತ್ರವೂ ತನಗೆ ಶಕ್ತಿ ಇಲ್ಲ ಅನ್ನುವವರೆಗೂ ಹಾರಿ ಹೋಯಿತು. ಆಗ ಒಮ್ಮೆ ನಿಂತು ಹಿಂದಿರುಗಿ ನೋಡಿತು. ಯಾರೂ ಅದನ್ನು ಬೆನ್ನಟ್ಟಿ ಬರುತ್ತಿರಲಿಲ್ಲ. ಸುತ್ತ ನೋಡಿತು. ತಾನೊಂದು ಅಪರಿಚಿತ ಸ್ಥಳ ದಲ್ಲಿರುವಂತೆ ಅದಕ್ಕೆ ಅನಿಸಿತು. ಕೆಳಗೆ ನೋಡಿತು. ಅಲ್ಲಿ ನದಿಯೇನೋ ಹರಿಯುತ್ತಿತ್ತು. ಆದರೆ ಅದು ಅದರ ನದಿಯಾಗಿರಲಿಲ್ಲ. ಅದು ಯಾವುದೋ ಅಪರಿಚಿತ ನದಿಯಾಗಿತ್ತು.

ಪುಟ್ಟ ಸ್ವಾಲೋ ಹಕ್ಕಿಗೆ ಗಾಬರಿಯಾಯಿತು.

ಹಿಂದಕ್ಕೆ ಮನೆಗೆ ಹೇಗೆ ಹೋಗುವುದೋ ಅದಕ್ಕೆ ತಿಳಿಯಲಿಲ್ಲ. ಆಶ್ಚರ್ಯವೇನಿಲ್ಲ. ಗಾಬರಿಯಿಂದ ಹಾರಿ ಬರುವಾಗ ಅದು ಸುತ್ತ ಯಾವುದೇ ಗುರುತನ್ನೂ ನೋಡಿ ನೆನಪಿನಲ್ಲಿಟ್ಟಿರಲಿಲ್ಲ.

ಆಗಲೇ ಸಂಜೆಯಾಗುತ್ತಿತ್ತು. ಇನ್ನೇನು ರಾತ್ರಿಯೂ ಆಗುವುದು. ಈಗೇನು ಮಾಡುವುದು?

ಅದು ಕೆಳಕ್ಕೆ ಹಾರಿ ಬಂದು ದಡದಲ್ಲಿ ಒಂದು ಮರದ ಟೊಂಗೆಯ ಮೇಲೆ ಕುಳಿತು ಗಟ್ಟಿಯಾಗಿ ಅಳ ತೊಡಗಿತು.

ಆಗ ಇದ್ದಕ್ಕಿದ್ದಂತೆ ನೋಡುತ್ತೆ – ಅದರ ಬಳಿಗೇ ಒಂದು ಪುಟ್ಟ ಹಳದಿ ಹಕ್ಕಿ ಮರಳಿನ ಮೇಲೆ ಓಡಿ ಕೊಂಡು ಬರುತ್ತಿದೆ. ಆ ಹಳದಿ ಹಕ್ಕಿಯ ಕತ್ತಿನ ಸುತ್ತ ಕಪ್ಪು ಪಟ್ಟಿ ಇತ್ತು.

ಸ್ವಾಲೋ ಹಕ್ಕಿ ಅಳು ನಿಲ್ಲಿಸಿ ಆ ಹಳದಿ ಹಕ್ಕಿಯನ್ನು ಕೇಳಿತು:

"ಹಕ್ಕಿ, ಹಕ್ಕಿ! ನಾನು ಹೇಗೆ ನನ್ನ ಮನೆಗೆ ಹೋಗೋದು, ದಯವಿಟ್ಟು ತಿಳಿಸ್ತೀಯ?"

"ಎಲ್ಲಿಂದ ಬಂದೆ?" ಹಳದಿ ಹಕ್ಕಿ ಕೇಳುತ್ತೆ.

"ನನಗೆ ಗೊತ್ತಿಲ್ಲ" ಸ್ವಾಲೋ ಹಕ್ಕಿ ಉತ್ತರಿಸುತ್ತೆ.

"ಹಾಗಾದರೆ ನಿನ್ನ ಮನೆ ಹುಡುಕೋದು ಕಷ್ಟವೇ!" ಹಳದಿ ಹಕ್ಕಿ ಹೇಳುತ್ತೆ. "ಇನ್ನೇನು ಸೂರ್ಯ ಮುಳುಗುತ್ತಾನೆ. ಕತ್ತಲಾಗುತ್ತೆ. ನೀನು ನನ್ನ ಮನೆಯಲ್ಲೇ ಉಳಿಯೋದು ವಾಸಿ, ನನ್ನ ಹೆಸರು ಜುಯೋಕ್ ಅಂತ. ನನ್ನ ಮನೆ ಇಲ್ಲೇ ಪಕ್ಕದಲ್ಲೇ ಇದೆ."

ಜುಯೋಕ್ ಕೆಲವು ಹೆಜ್ಜೆ ಓಡಿ ಹೋಗಿ ತನ್ನ ಕೊಕ್ಕಿನಿಂದ ಮರಳನ್ನು ತೋರಿಸಿತು. ಆಮೇಲೆ ಬಾಗಿ ತನ್ನ ತೆಳುವಾದ ಕಾಲುಗಳ ಮೇಲೆ ತೂರಾಡುತ್ತ ನಿಂತು ಹೇಳಿತು:

"ಇದೇ ನೋಡು ನನ್ನ ಮನೆ. ಬಾ, ಒಳಗೆ ಬಾ!"

ಸ್ವಾಲೋ ಹಕ್ಕಿ ನೋಡಿತು. ಅದಕ್ಕೆ ಮನೆ ಅಂತಹುದು ಏನೂ ಕಾಣಲೇ ಇಲ್ಲ. ಕಂಡುದೆಲ್ಲ ಸುತ್ತ ಮರಳು ಹಾಗೂ ಬೆಣಚು ಕಲ್ಲುಗಳು.





"ಯಾಕೆ ಕಾಣ್ತಿಲ್ಲವೇ ?" ಜುಯೋಕ್ ಆಶ್ಚರ್ಯದಿಂದ ಕೇಳಿತು. "ಇಲ್ಲಿ ನೋಡು, ಇಲ್ಲಿ. ಈ ಕಲ್ಲುಗಳ ನಡುವೆ ಮೊಟ್ಟೆಗಳು ಇಲ್ಲವೇ, ಇದೇ ನನ್ನ ಮನೆ."

ಸ್ವಾಲೋ ಹಕ್ಕಿ ಕಣ್ಣಲ್ಲಿ ಕಣ್ಣಿಟ್ಟು ನೋಡಿತು. ಕೊನೆಗೆ ಅದಕ್ಕೆ ಹತ್ತಿರದಲ್ಲೇ ಮರಳಿನಲ್ಲಿ ಬೆಣಚು ಕಲ್ಲುಗಳ ಮಧ್ಯೆ ಚುಕ್ಕೆಚುಕ್ಕೆಗಳಿರುವ ನಾಲ್ಕು ಪುಟ್ಟ ಮೊಟ್ಟೆಗಳು ಕಂಡುಬಂದವು.

"ಏನಂತೀಯ ?" ಜುಯೋಕ್ ಕೇಳಿತು. "ನಿನಗೆ ನನ್ನ ಮನೆ ಇಷ್ಟವಾಗಲಿಲ್ಲವೇ ?"

ಸ್ವಾಲೋ ಹಕ್ಕಿಗೆ ಏನು ಹೇಳಬೇಕೋ ಗೊತ್ತಾಗಲಿಲ್ಲ. ಅಲ್ಲಿ ಮನೆಯೇ ಇರಲಿಲ್ಲ ಅಂತ ಹೇಳಿದರೆ ಆ ಹಕ್ಕಿಯ ಮನಸ್ಸಿಗೆ ನೋವು ಉಂಟು ಮಾಡಿದ ಹಾಗಾಗುತ್ತಿತ್ತು. ಆದ್ದರಿಂದ ಅದು ಹೇಳಿತು:

"ನನಗೆ ಬಯಲಲ್ಲಿ ತಣ್ಣಗಿನ ಮರಳಿನ ಮೇಲೆ ಹೊದಿಕೆಯಿಲ್ಲದೆಯೇ ಮಲಗುವುದು ಅಭ್ಯಾಸವಿಲ್ಲ."

"ಅಯ್ಯೋ, ಪಾಪ ! ಅಭ್ಯಾಸವಿಲ್ಲದಿದ್ದರೆ ಕಷ್ಟವೇ" ಅಂದಿತು ಜುಯೋಕ್. "ಹಾಗಾದರೆ ಅಲ್ಲಿ ನೋಡು, ಆ ಫರ್ ಮರಗಳ ತೋಪಿಗೆ ಹೋಗು. ಅಲ್ಲಿ ವಿತ್ಯುತೆನ್ ಅನ್ನುವ ಪಾರಿವಾಳದ ಮನೆ ಎಲ್ಲಿದೆ ಅಂತ ಕೇಳು, ಅದರ ಮನೆಗೆ ಒಳ್ಳೆಯ ನೆಲ ಇದೆ. ಅಲ್ಲಿ ನೀನು ರಾತ್ರಿ ಕಳೆಯಬಹುದು."

"ಸರಿ. ಹಾಗೆಯೇ ಆಗಲಿ. ವಂದನೆಗಳು!" ಎಂದು ಹೇಳಿ ಸ್ವಾಲೋ ಹಕ್ಕಿ ಫರ್ ಮರಗಳ ತೋಪಿಗೆ ಹಾರಿ ಹೋಯಿತು.

ಅಲ್ಲಿ ಅದಕ್ಕೆ ವಿತ್ಯುತೆನ್ ಪಾರಿವಾಳದ ಮನೆಯನ್ನು ಹುಡುಕುವುದು ಕಷ್ಟವಾಗಲಿಲ್ಲ. "ರಾತ್ರಿಯನ್ನು ನಿನ್ನ ಮನೆಯಲ್ಲಿ ಕಳೆಯಬಹುದೇ?" ಎಂದು ಅದು ಪಾರಿವಾಳವನ್ನು ಕೇಳಿತು.

"ಆಗಬಹುದು, ನಿನಗೆ ನನ್ನ ಮನೆ ಇಷ್ಟವಾಗುವುದಾದಲ್ಲಿ" ಎಂದಿತು ಪಾರಿವಾಳ.

ಪಾರಿವಾಳದ ಮನೆಯಾದರೂ ಹೇಗಿತ್ತು? ಅಲ್ಲಿದ್ದುದೆಲ್ಲ ಒಂದು ನೆಲವಷ್ಟೆ. ಅದರಲ್ಲೂ ಜಲ್ಲಡಿಯಂತೆ ಸಾವಿರಾರು ತೂತುಗಳು. ಅದು ಕೊಂಬೆಗಳ ನಡುವೆ ಸುಮ್ಮನೆ ಹತ್ತಾರು ಕಡ್ಡಿಗಳನ್ನು ಹಾಗೆ ಹೀಗೆ ಇರಿಸಿ ಅದನ್ನೇ ಮನೆ ಎಂದು ಕರೆದುಕೊಂಡಿತ್ತು.

ಕಡ್ಡಿಗಳ ಮೇಲೆ ಬಿಳಿ ಮೊಟ್ಟೆಗಳಿದ್ದವು. ಅವುಗಳನ್ನು ಕೆಳಗಿನಿಂದಲೇ ನೋಡಬಹುದಿತ್ತು, ನೆಲದ ತೂತುಗಳ ಮೂಲಕ.

ಸ್ವಾಲೋ ಹಕ್ಕಿಗೆ ಆಶ್ಚರ್ಯವಾಯಿತು. ಅದು ಪಾರಿವಾಳಕ್ಕೆ ಹೇಳಿತು:

"ನಿಮ್ಮ ಮನೆಯಲ್ಲಿ ಬರೀ ನೆಲವಷ್ಟೆ ಇದೆ. ಗೋಡೆಗಳೇ ಇಲ್ಲವಲ್ಲ. ಇಲ್ಲಿ ಮಲಗೋದಾದರೂ ಹೇಗೆ?"

"ಹಾಗಾ? ನಿನಗೆ ಗೋಡೆಗಳಿರುವ ಮನೆ ಬೇಕು ಅನ್ನುವುದಾದರೆ ಓರಿಯೋಲ್ ಹಕ್ಕಿಯ ಮನೆಗೆ ಹೋಗು. ಅದರ ಮನೆ ನಿನಗೆ ಇಷ್ಟವಾಗಬಹುದು."

ಪಾರಿವಾಳವು ಸ್ವಾಲೋ ಹಕ್ಕಿಗೆ ಓರಿಯೋಲ್ ಹಕ್ಕಿಯ ವಿಳಾಸ ಹೇಳಿತು: ಬರ್ಚ್ ಮರಗಳ ತೋಪಿನಲ್ಲಿದ್ದ ಅತ್ಯಂತ ಸುಂದರವಾದ ಬರ್ಚ್ ಮರ.

ಸ್ವಾಲೋ ಹಕ್ಕಿಯು ಬರ್ಚ್ ಮರಗಳ ತೋಪಿನ ಕಡೆಗೆ ಹಾರಿ ಹೋಯಿತು. ಅಲ್ಲಿದ್ದ ಎಲ್ಲ ಮರಗಳೂ ಅದಕ್ಕೆ ಸುಂದರವಾಗಿಯೇ ಕಂಡವು. ಓರಿಯೋಲ್ ಹಕ್ಕಿಯ ಮನೆಗಾಗಿ ತುಂಬ ಹುಡುಕಾಡಿತು. ಕೊನೆಗೆ ಅದು ಒಂದು ಪುಟ್ಟ ಕೊಂಬೆಗೆ ತಗುಲಿಕೊಂಡಂತಿದ್ದ ಒಂದು ಚೆಲುವಾದ ಪುಟ್ಟ ಮನೆಯನ್ನು ಕಂಡಿತು. ಅದು



ತುಂಬ ಸುಖಕರವಾಗಿದ್ದಂತೆ ಕಂಡಿತು, ಬೂದು ಬಣ್ಣದ ಕಾಗದದ ಚೂರುಗಳಿಂದ ಮಾಡಿದ ಸೊಗಸಾದ ರೋಜಾ ಹೂವಿನಂತೆ ಕಂಡುಬಂದಿತು.

"ಎಷ್ಟು ಪುಟ್ಟದಾಗಿದೆ ಈ ಓರಿಯೋಲ್‌ನ ಮನೆ! ಇಲ್ಲಿ ನನಗೆಲ್ಲಿ ಸ್ಥಳವಿರುತ್ತೆ" ಎಂದು ಸ್ವಾಲೋ ಹಕ್ಕಿ ತನ್ನಲ್ಲೇ ಹೇಳಿಕೊಂಡಿತು. ಆದರೂ ಬಾಗಿಲು ತಟ್ಟಿ ನೋಡಲು ನಿರ್ಧರಿಸಿತು. ಅದು ಬಾಗಿಲು ತಟ್ಟಿತೋ ಇಲ್ಲವೋ, ಕೂಡಲೇ ಆ ಪುಟ್ಟ ಬೂದು ಮನೆಯಿಂದ ಕಣಜದ ಹುಳುಗಳ ಒಂದು ಹಿಂಡೇ ಹೊರ ಬಂದಿತು. ಅವು ಸ್ವಾಲೋ ಹಕ್ಕಿಯ ಸುತ್ತ ಮುತ್ತಿ ಕೋಪದಿಂದ ಝೇಂಕರಿಸಿದವು. ಅವು ಸ್ವಾಲೋ ಹಕ್ಕಿಯನ್ನು ತಮ್ಮ ಮುಳ್ಳುಗಳಿಂದ ಚುಚ್ಚುವುವೋ ಎಂದು ಕಂಡುಬಂದಿತು.

ಪುಟ್ಟ ಸ್ವಾಲೋ ಹಕ್ಕಿಯು ಹೆದರಿ ಸಾಧ್ಯವಾದಷ್ಟೂ ಬೇಗ ಅಲ್ಲಿಂದ ಹಾರಿ ಹೋಯಿತು. ಅದು ಉಜ್ವಲವಾಗಿ ಹೊಳೆಯುತ್ತಿದ್ದ ಎಲೆಗಳ ಮಧ್ಯೆ ಹಾರಿಹೋಯಿತು.

ಆಗ ಇದ್ದಕ್ಕಿದ್ದಂತೆ ಅದರ ಪಕ್ಕದಲ್ಲೇ ಹೊಂಬಣ್ಣ ಹಾಗೂ ಕಪ್ಪು ಬಣ್ಣದ ಏನೋ ಇದ್ದುದು ಅದಕ್ಕೆ ಕಂಡುಬಂದಿತು. ನಿಂತು ನೋಡಿದಾಗ ಸ್ವಾಲೋ ಹಕ್ಕಿಗೆ ಕಪ್ಪು ರೆಕ್ಕೆಗಳ ಬಂಗಾರದ ಹಕ್ಕಿಯೊಂದು ಕೊಂಬೆಯೊಂದರ ಮೇಲೆ ಕುಳಿತಿದ್ದುದು ಕಂಡುಬಂದಿತು.

"ಪುಟ್ಟ ಸ್ವಾಲೋ ಹಕ್ಕಿ, ನೀನು ಇಷ್ಟು ಅವಸರವಾಗಿ ಎಲ್ಲಿಗೆ ಹಾರಿಹೋಗುತ್ತಿದ್ದೀಯ?" ಅದು ಕೇಳಿತು.

"ನಾನು ಓರಿಯೋಲ್ ಹಕ್ಕಿಯ ಮನೆಯನ್ನು ಹುಡುಕುತ್ತಿದ್ದೇನೆ."

"ನಾನೇ ಓರಿಯೋಲ್ ಹಕ್ಕಿ. ನನ್ನ ಮನೆ ಇಲ್ಲೇ ಈ ಸುಂದರವಾದ ಬರ್ಚ್ ಮರದ ಮೇಲಿದೆ."

ಪುಟ್ಟ ಸ್ವಾಲೋ ಹಕ್ಕಿ ಆ ಬರ್ಚ್ ಮರವನ್ನು ನೋಡಿತು. ಅಲ್ಲಿ ಅದಕ್ಕೆ ಮೊದಲು ಹಸುರು ಎಲೆಗಳು, ಬಿಳಿ ಕೊಂಬೆಗಳು ಬಿಟ್ಟು ಬೇರೇನೂ ಕಾಣಲಿಲ್ಲ. ಆಮೇಲೆ ನಿಜಕ್ಕೂ ಸೂಕ್ಷ್ಮವಾಗಿ ನೋಡಿದಾಗ ಅದಕ್ಕೆ ಬೆಕ್ಕಸ ಬೆರಗಾಯಿತು, ಅದು ಏದುಸಿರು ಬಿಟ್ಟಿತು.

ಅಲ್ಲಿ, ನೆಲದಿಂದ ತುಂಬ ಎತ್ತರದಲ್ಲಿ ಹಗುರವಾದ ಜೇಬಿನ ಆಕಾರದ ಬುಟ್ಟಿಯೊಂದು ಕೊಂಬೆಯೊಂದ





ರಿಂದ ನೇತು ಬಿದ್ದಿದ್ದಿತು. ಅದನ್ನು ನಾರು, ಹುಲ್ಲು, ಉಣ್ಣೆ ಹಾಗೂ ಕೂದಲಿನ ಎಳೆಗಳು, ಕಾಗದದಷ್ಟು ತೆಳುವಾದ ಬರ್ಚ್ ಮರದ ತೊಗಟೆಯ ಚೂರುಗಳು, ಇವುಗಳಿಂದ ಬಹು ಸುಂದರವಾಗಿ ಹೆಣೆದು ನಿರ್ಮಿಸಲಾಗಿತ್ತು.

"ಓಹ್, ನನಗಂತೂ ಇಂಥ ಸೂಕ್ಷ್ಮವಾದ ಮನೆಯಲ್ಲಿ ಇರಲು ಆಗುವುದಿಲ್ಲ ! ಗಾಳಿಯಲ್ಲಿ ಅದು ತೂರಾಡುತ್ತಿರುವುದನ್ನು ನೋಡಿದರೇ ನನ್ನ ತಲೆ ತಿರುಗುತ್ತೆ, ಯಾವುದೇ ಘಳಿಗೆಯಲ್ಲಿ ಅದು ಗಾಳಿಯಲ್ಲಿ ಹಾರಿ ಹೋಗುವುದೆಂದೇ ಕಂಡುಬರುತ್ತೆ. ಅಲ್ಲದೆ ನಿನ್ನ ಮನೆಗೆ ಮೇಲ್ಛಾವಣಿಯೂ ಇಲ್ಲ."

ಈ ಮಾತನ್ನು ಕೇಳಿ ಬಂಗಾರದ ಓರಿಯೋಲ್ ಪಕ್ಷಿಯ ಮನಸ್ಸಿಗೆ ನೋವಾಯಿತು. ಅದು ಹೇಳಿತು: "ಹಾಗಾದರೆ ನೀನು ಚಿಫ್-ಚಾಫ್ ಹಕ್ಕಿಯ ಮನೆಗೆ ಹೋಗು. ತೆರೆದ ಮನೆಯಲ್ಲಿ ಮಲಗಲು ನಿನಗೆ ಹೆದರಿಕೆಯಾದರೆ, ಆ ಹಕ್ಕಿಯ ಗುಡಿಸಿಲು ನಿನಗೆ ಬಹುಶಃ ಇಷ್ಟವಾಗಬಹುದು. ಅದಕ್ಕೆ ಮೇಲ್ಛಾವಣಿ ಇದೆ."

ಸ್ವಾಲೋ ಹಕ್ಕಿ ಚಿಫ್-ಚಾಫ್ ಮನೆಯನ್ನು ಹುಡುಕಿಕೊಂಡು ಹೊರಟಿತು.

ಹಳದಿಯ ಪುಟ್ಟ ಚಿಫ್-ಚಾಫ್ ಹಕ್ಕಿ ಓರಿಯೋಲ್ ಹಕ್ಕಿಯ ಬುಟ್ಟಿ ತೂಗಿ ಬಿದ್ದಿದ್ದ ಬರ್ಚ್ ಮರದ ಬಳಿಯೇ ಹುಲ್ಲಿನಲ್ಲಿ ವಾಸಮಾಡುತ್ತಿತ್ತು.

ಸ್ವಾಲೋ ಹಕ್ಕಿಗೆ ಆ ಗುಡಿಸಿಲು ತುಂಬ ಇಷ್ಟವಾಯಿತು. ಅದನ್ನು ಒಣಗಿದ ಹುಲ್ಲು ಹಾಗೂ ಜೊಂಡಿನಿಂದ ಮಾಡಲಾಗಿತ್ತು. "ಎಷ್ಟು ಸುಖಕರವಾಗಿದೆ ಇದು !" – ಸಂತೋಷಪಟ್ಟಿತು ಅದು. "ಇದಕ್ಕೆ ನೆಲ ಇದೆ, ಗೋಡೆಗಳಿವೆ, ಮೇಲ್ಛಾವಣಿ ಇದೆ, ತುಪ್ಪುಳದ ಹಾಸಿಗೆಯೂ ಇದೆ. ನಮ್ಮ ಮನೆ ಇದ್ದಂತೆಯೇ ಇದೆ ಇದು."

ಚಿಫ್-ಚಾಫ್‌ಗೂ ಸ್ವಾಲೋ ಹಕ್ಕಿಯ ಜೊತೆ ಸಿಕ್ಕಿದ್ದು ಸಂತೋಷವೇ ಆಯಿತು. ಎಲ್ಲಿ ಮಲಗಬೇಕು ಅಂತ ಅದು ಸ್ವಾಲೋ ಹಕ್ಕಿಗೆ ಹೇಳುತ್ತಿತ್ತು. ಆಗ ಇದ್ದಕ್ಕಿದ್ದಂತೆ ನೆಲ ನಡುಗ ತೊಡಗಿತು. ಸ್ವಾಲೋ ಹಕ್ಕಿಗೆ ಗಾಬರಿಯಾಯಿತು. ತಲೆ ನಿಮಿರಿಸಿಕೊಂಡು ನೋಡಿತು. ಅದಕ್ಕೆ ಗುಡುಗುಡು ಶಬ್ದ ಕೇಳಿಬಂದಿತು. ಚಿಫ್-ಚಾಫ್ ಹಕ್ಕಿಯಾದರೋ ಎಷ್ಟು ಮಾತ್ರವೂ ಗಾಬರಿಗೊಳ್ಳದೆ ಹೇಳಿತು:

"ಏನಿಲ್ಲ. ಕುದುರೆಗಳು ತೋಪಿನ ಕಡೆಗೆ ಓಡಿಕೊಂಡು ಬರುತ್ತಿವೆ ಅಂತ ಕಾಣಿಸುತ್ತೆ."

"ಕುದುರೆ ಕಾಲಿಟ್ಟು ಬಿಟ್ಟರೆ ನಿನ್ನ ಗೂಡು ಅಪ್ಪಚ್ಚಿಯಾಗೊಲ್ವೆ?"



ಹೌದು ಅನ್ನುವಂತೆ ಚಿಫ್-ಚಾಫ್ ದುಃಖದಿಂದ ತಲೆ ಆಡಿಸಿತು.

"ಓಹ್, ಹಾಗಾದರೆ ಈ ಜಾಗ ಎಷ್ಟು ಅಪಾಯದಿಂದ ಕೂಡಿದೆ !" ಎನ್ನುತ್ತ ಸ್ವಾಲೋ ಹಕ್ಕಿ ತಕ್ಷಣವೇ ಗುಡಿಸಿಲಿನಿಂದ ಹೊರಕ್ಕೆ ಹಾರಿ ಬಂದಿತು. "ಎಲ್ಲಿ ಕುದುರೆ ಬಂದು ತುಳಿದು ಸಾಯಿಸುತ್ತೋ ಅನ್ನೋ ಚಿಂತೆಯಲ್ಲಿ ಇಲ್ಲಿ ನನಗೆ ಒಂದು ನಿಮಿಷವೂ ನಿದ್ದೆ ಬರ್ಲೊಲ್ಲ. ನಮ್ಮ ಮನೆಯೇ ಎಷ್ಟೋ ಹೆಚ್ಚು ಸುರಕ್ಷಿತ. ಅಲ್ಲಿ ಯಾರೂ ನಿನ್ನನ್ನು ತುಳಿದು ಸಾಯಿಸೋದೂ ಇಲ್ಲ, ಇಲ್ಲವೇ ನೆಲಕ್ಕೆ ಅಪ್ಪಳಿಸೋದೂ ಇಲ್ಲ."

"ಹಾಗೋ ! ಹಾಗಿದ್ದರೆ ನಿನ್ನ ಮನೆ ಬಹುಶಃ ಗ್ರೀಬ್ ಹಕ್ಕಿಯ ಮನೆಯಂತಿರಬೇಕು" ಎಂದಿತು ಚಿಫ್-ಚಾಫ್. "ಅದರ ಮನೆ ಮರದ ಮೇಲಿಲ್ಲ. ಆದ್ದರಿಂದ ಗಾಳಿಗೆ ತೂರಿ ಹೋಗುವ ಸಂಭವವಿಲ್ಲ. ಅದು ನೆಲದ ಮೇಲೂ ಇಲ್ಲ. ಹಾಗಾಗಿ ಯಾರೂ ಅದನ್ನು ತುಳಿದು ಹಾಕುವ ಸಾಧ್ಯತೆಯೂ ಇಲ್ಲ. ಅದರ ಮನೆಗೆ ನಿನ್ನನ್ನು ಕರೆದುಕೊಂಡು ಹೋಗಲಾ ?"

"ಹುಂ. ಕರೆದುಕೊಂಡು ಹೋಗು !"

ಅವು ಸರೋವರಕ್ಕೆ ಗ್ರೀಬ್ ಹಕ್ಕಿಯನ್ನು ಹುಡುಕಿಕೊಂಡು ಹಾರಿ ಹೊರಟವು.

ಅಲ್ಲಿ ಜೊಂಡುಗಳ ಒಂದು ಪುಟ್ಟ ನಡುಗಡ್ಡೆ ಇದ್ದಿತು. ಅದರ ಸುತ್ತ ನೀರಿತ್ತು. ನಡುಗಡ್ಡೆಯ





ಮೇಲೆ ಒಂದು ದಪ್ಪ ತಲೆಯ ಹಕ್ಕಿ ಕೂತಿತ್ತು. ಅದರ ತಲೆಯ ಮೇಲೆ ಪುಕ್ಕಗಳು ಪುಟ್ಟ ಪುಟ್ಟ ಕೊಂಬು ಗಳಂತೆ ಎದ್ದು ನಿಂತಿದ್ದವು.

ಚಿಫ್-ಚಾಫ್ ಹಕ್ಕಿ ಸ್ವಾಲೋ ಹಕ್ಕಿಯನ್ನು ಅಲ್ಲಿ ಬಿಟ್ಟು, ಆ ಕೊಂಬಿನ ಹಕ್ಕಿಯನ್ನು ರಾತ್ರಿ ಮಲಗಲು ಅವಕಾಶ ಕೊಡುವಂತೆ ಕೇಳು ಎಂದು ಸೂಚಿಸಿ, ವಿದಾಯ ಹೇಳಿ ಹೊರಟು ಹೋಯಿತು.

ಸ್ವಾಲೋ ಹಕ್ಕಿಯು ಸರೋವರದ ಮಧ್ಯದಲ್ಲಿದ್ದ ಆ ನಡುಗಡ್ಡೆಗೆ ಹಾರಿಹೋಯಿತು. ಅಲ್ಲಿ ಹೋಗಿ ನೋಡಿ ಅದಕ್ಕೆ ಅತ್ಯಾಶ್ಚರ್ಯವಾಯಿತು – ಆ ನಡುಗಡ್ಡೆ ತೇಲುತ್ತಿತ್ತು ! ಅದು ವಾಸ್ತವವಾಗಿ ನೀರಿನ ಮೇಲೆ ಕೆಳಕ್ಕೂ ಮೇಲಕ್ಕೂ ತೂಗಾಡುತ್ತಿದ್ದ ಒಣಗಿದ ಜೊಂಡುಗಳ ಕುಪ್ಪೆಯಾಗಿತ್ತು. ಅದರ ಮಧ್ಯದಲ್ಲಿ ಒಂದು ಸಣ್ಣ ತಗ್ಗು ಇದ್ದಿತು. ಈ ತಗ್ಗಿನ ಒಳ ಮೈ ಮೇಲೆ ಮೃದುವಾದ ಜೌಗುಹುಲ್ಲಿನ ಆವರಣವಿದ್ದಿತು. ಅದರ ಮೇಲೆ ಗ್ರೀಬ್ ಹಕ್ಕಿಯ ಮೊಟ್ಟೆಗಳಿದ್ದವು. ಅವುಗಳ ಮೇಲೆ ಯಾವುವೋ ತೆಳುವಾದ ಒಣಗಿದ ಪುಟ್ಟ ಜೊಂಡುಗಳನ್ನು ಇರಿಸಲಾಗಿತ್ತು.

ಗ್ರೀಬ್ ಹಕ್ಕಿಯೂ ಈ ತೇಲುವ ನಡುಗಡ್ಡೆಯ ಅಂಚಿನ ಮೇಲೆ ಕುಳಿತಿತ್ತು. ಅದೊಂದು ದೋಣಿ ಯೇನೋ ಅನ್ನುವಂತೆ ಅದರ ಮೇಲೆ ಕುಳಿತು ಸರೋವರದಲ್ಲಿ ಯಾನ ಹೋಗುತ್ತಿರುವಂತಿತ್ತು.

ಸ್ವಾಲೋ ಹಕ್ಕಿಯು ಗ್ರೀಬ್ ಹಕ್ಕಿಯ ಬಳಿಗೆ ಹೋಗಿ ತಾನು ರಾತ್ರಿ ಕಳೆಯಲು ಒಂದು ಸ್ಥಳಕ್ಕಾಗಿ ಹುಡುಕುತ್ತಿರುವುದಾಗಿಯೂ, ಆ ನಡುಗಡ್ಡೆಯ ಮೇಲೆ ತಾನೂ ಉಳಿದುಕೊಳ್ಳಲು ಸಾಧ್ಯವೇ, ಎಂದು ಕೇಳಿತು.

"ತೆರೆಗಳ ಮೇಲೆ ತೇಲಿಕೊಂಡು ಹೋಗುತ್ತಲೇ ನಿದ್ರೆ ಮಾಡಲು ನಿನಗೆ ಹೆದರಿಕೆ ಇಲ್ಲವಷ್ಟೆ ?" ಎಂದು ಗ್ರೀಬ್ ಹಕ್ಕಿ ಕೇಳಿತು.

"ಅಲ್ಲ, ನೀವು ರಾತ್ರಿ ಹೊತ್ತು ನಿಮ್ಮ ಈ ಮನೆಯನ್ನು ದಡಕ್ಕೆ ಕಟ್ಟಿ ಹಾಕಿರುವುದಿಲ್ಲವೇ ?"

"ನನ್ನ ಮನೆಯೇನೂ ಉಗಿಜಹಜು ಅಲ್ಲ. ಗಾಳಿ ಬೀಸಿದ ಕಡೆಗೆ ಅದು ಹೋಗುತ್ತಿರುತ್ತೆ. ಇಡೀ ರಾತ್ರಿ ಕೆಳಕ್ಕೂ ಮೇಲಕ್ಕೂ ತೂಗಾಡುತ್ತಿರುತ್ತೆ."

"ಹಾಗಿದ್ದರೆ ನನಗೆ ಇಲ್ಲಿ ಮಲಗಲು ಭಯವಾಗುತ್ತೆ. ನನ್ನ ಮನೆಗೇ ನಾನು ಹೋಗೋದು ವಾಸಿ."

ಗ್ರೀಬ್ ಹಕ್ಕಿಗೆ ಕೋಪ ಬಂದಿತು. "ಹೋಗು ಹಾಗಿದ್ದರೆ. ನೀನೊಬ್ಬ ಅಲ್ಪ ವಿಚಾರಗಳನ್ನೇ ಅತಿ ಮಾಡಿ ನೋಡುವವ. ನಿನಗೆ ಯಾವುದೂ ತೃಪ್ತಿ ನೀಡುವುದಿಲ್ಲ ಅಂತ ಕಾಣುತ್ತೆ. ಹೋಗು, ನಿನಗೆ ಎಲ್ಲಿಗೆ ಬೇಕೋ

ಅಲ್ಲಿಗೇ ಹೋಗು. ನಿನಗೆ ಏನು ಬೇಕೋ ಅದನ್ನೇ ಕಂಡುಕೋ." ಹಾಗೆಂದು ಅದು ಸ್ವಾಲೋ ಹಕ್ಕಿಯನ್ನು ಹೊರಕ್ಕೆ ಅಟ್ಟಿತು.

ಪುಟ್ಟ ಸ್ವಾಲೋ ಹಕ್ಕಿ ಹಾರಿಹೋಯಿತು. ಅದು ಗಟ್ಟಿಯಾಗಿ ಅಳುತ್ತಿತ್ತು. ಏಕೆಂದರೆ ಕ್ಷಣಕ್ಷಣಕ್ಕೂ ಹೆಚ್ಚು ಕತ್ತಲೆಯಾಗುತ್ತಿತ್ತು. ಬೇಗನೆಯೇ ಅದು ಒಂದು ದಟ್ಟವಾದ ಕಾಡು ತಲುಪಿತು. ಅಲ್ಲಿ ದೊಡ್ಡ ಮರದ ಕೊಂಬೆಯೊಂದರ ಮೇಲೆ ಒಂದು ಮನೆಯನ್ನು ಕಂಡಿತು. ಅದರ ಒಳ ಮೈ ಮೇಲೆ ಮೃದುವಾದ ಬೆಚ್ಚಗಿನ ಪಾಚಿಯ ಆವರಣವಿದ್ದಿತು.

"ಓಹ್, ಇದೀಗ ನನಗೆ ಸರಿಯಾದ ಸ್ಥಳ. ಇದು ಗಟ್ಟಿಮುಟ್ಟಾಗಿಯೂ ಇದೆ, ಇದಕ್ಕೆ ಮೇಲ್ಚಾವಣಿಯೂ ಇದೆ."

ಪುಟ್ಟ ಸ್ವಾಲೋ ಹಕ್ಕಿಯು ಆ ದೊಡ್ಡ ಮನೆಯ ಬಳಿಗೆ ಹಾರಿಹೋಗಿ ತನ್ನ ಕೊಕ್ಕಿನಿಂದ ಅದರ ಬಾಗಿಲನ್ನು ಮೆಲ್ಲನೆ ತಟ್ಟಿತು. "ದಯವಿಟ್ಟು ನನಗೆ ರಾತ್ರಿಯನ್ನು ನಿಮ್ಮ ಮನೆಯಲ್ಲಿ ಕಳೆಯಲು ಬಿಡುವಿರಾ?" ಎಂದು ಕರುಣೆ ಹುಟ್ಟಿಸುವಂಥ ಧ್ವನಿಯಲ್ಲಿ ಕೇಳಿತು.





ಬಾಗಿಲು ತೆರೆದುಕೊಂಡಿತು. ಅದರೊಳಗಿನಿಂದ ಹಠಾತ್ತನೆ ಒಂದು ಭಯಂಕರವಾದ ಕಂದು ತುಪ್ಪುಳದ ತಲೆ ಹೊರಕ್ಕೆ ಚಾಚಿಕೊಂಡಿತು. ಅದಕ್ಕೆ ಬಿರುಗೂದಲಿನ ಮೀಸೆ ಇತ್ತು. ಹಳದಿಯ ಹಲ್ಲುಗಳಿದ್ದವು. ಆ ಭೀಕರ ಪ್ರಾಣಿ ಗುರುಗುಟ್ಟಿತು: "ಇದೇನಿದು? ಇಂಥ ರಾತ್ರಿ ವೇಳೆಯಲ್ಲಿ ಹಕ್ಕಿಗಳು ಅಳಿಲಿನ ಮನೆಗೆ ಬಂದು ಬಾಗಿಲು ತಟ್ಟೋದು ಅಂದರೇನು? ಒಳಗೆ ಬಿಡು ಅಂತ ಬೇರೆ ಕೇಳುತ್ತಿದೆಯಲ್ಲ, ಇದು!"

ಪುಟ್ಟ ಸ್ವಾಲೋ ಹಕ್ಕಿಗೆ ಹೆದರಿಕೆಯಿಂದ ಜೀವ ಹೋದಂತಾಯಿತು. ರಕ್ತ ಹೆಪ್ಪುಗಟ್ಟಿತು. ಅದು ತಕ್ಷಣವೇ ದೂರ ಕುಪ್ಪಳಿಸಿತು. ಆಮೇಲೆ ಕಾಡಿನ ಮೇಲೆ ಜೋರಾಗಿ ಹಾರಿಕೊಂಡು ಹೋಯಿತು, ಒಮ್ಮೆಯೂ ಹಿಂದಕ್ಕೆ ತಿರುಗಿ ನೋಡದೆ ಸಾಧ್ಯವಾದಷ್ಟೂ ಶೀಘ್ರವಾಗಿ ಹಾರಿಕೊಂಡು ಹೋಯಿತು.

ಅದು ಹಾರುತ್ತ ಹಾರುತ್ತಲೇ ಹೋಯಿತು – ಕೊನೆಗೆ ಹಾರಲು ಇನ್ನೆಷ್ಟು ಮಾತ್ರವೂ ತನಗೆ ಶಕ್ತಿ ಇಲ್ಲ ಅನ್ನುವವರೆಗೂ ಹಾರಿಕೊಂಡು ಹೋಯಿತು. ಆಗ ಒಮ್ಮೆ ಹಿಂದಿರುಗಿ ನೋಡಿತು. ಯಾರೂ ಅದನ್ನು ಬೆನ್ನಟ್ಟಿ ಬರುತ್ತಿರಲಿಲ್ಲ. ಸುತ್ತೂ ನೋಡಿತು – ಸ್ಥಳ ಪರಿಚಿತವಾದುದು! ಕೆಳಗೆ ನೋಡಿತು. ನದಿಯೊಂದು ಹರಿಯುತ್ತಿತ್ತು. ಅಯ್ಯೋ, ಇದು ತನ್ನದೇ, ತನ್ನ ಪ್ರೀತಿಪಾತ್ರ ನದಿ!

ಅದು ಕೆಳಕ್ಕೆ ಧುಮುಕಿ ನೀರಿನೊಳಗೆ ಮುಳುಗು ಹಾಕಿತು. ಆಮೇಲೆ ನೀರಿನ ಮೇಲೆ ಬಂದ ಕೂಡಲೇ ಮತ್ತೆ ಎತ್ತರಕ್ಕೆ ಹಾರಿತು, ಕೋಡುಗಲ್ಲಿನ ಮೇಲಕ್ಕೆ ಹಾರಿಹೋಗಿ ಕುಳಿತಿತು.

ಆಮೇಲೆ ಅದು ಕಣ್ಮರೆಯಾಯಿತು.

ಕೋಡುಗಲ್ಲಿನ ಪಕ್ಕವೆಲ್ಲ ರಂಧ್ರಗಳಿಂದ ತುಂಬಿತ್ತು. ಒಂದೊಂದು ರಂಧ್ರವೂ ಒಂದೊಂದು ಸ್ವಾಲೋ ಹಕ್ಕಿಯ ಗೂಡಾಗಿತ್ತು. ಪುಟ್ಟ ಸ್ವಾಲೋ ಹಕ್ಕಿಯು ಇಂಥ ರಂಧ್ರವೊಂದರೊಳಕ್ಕೆ ಹೋಗಿ ಕಣ್ಮರೆಯಾಗಿದ್ದಿತು. ಅದು ಈ ರಂಧ್ರದೊಳ ಹೊಕ್ಕು ಒಂದು ತುಂಬ ಉದ್ದವಾದ ಸುರಂಗದ ಮೂಲಕ ಓಡಿ ಹೋಯಿತು. ಆ ಸುರಂಗದ ಕೊನೆ ತಲುಪಿದಾಗ ಅಲ್ಲೊಂದು ಗುಂಡಾದ ದೊಡ್ಡದಾದ ಕೋಣೆಯಿದ್ದಿತು.

ಅದರ ತಾಯಿ ಅಲ್ಲಿ ಅದಕ್ಕಾಗಿ ಕಾಯುತ್ತಿತ್ತು.

ತುಂಬ ಬಳಲಿದ್ದ ಪುಟ್ಟ ಸ್ವಾಲೋ ಹಕ್ಕಿಯು ಅಲ್ಲಿ ಆ ರಾತ್ರಿ ಒಣಗಿದ ಹುಲ್ಲು, ಕುದುರೆ ಬಾಲದ ಕೂದಲು ಹಾಗೂ ಪುಕ್ಕಗಳಿಂದ ಮಾಡಿದ ಮೃದುವಾದ ಬೆಚ್ಚಗಿನ ತನ್ನ ಸ್ವಂತ ಹಾಸಿಗೆಯ ಮೇಲೆಯೇ ಮಲಗಿ ಗಾಢ ನಿದ್ರೆಯಲ್ಲಿ ಮುಳುಗಿತು...

ಶುಭ ರಾತ್ರಿ !





# ಕೆಂಪು ಗುಡ್ಡ

ಚಿರ್ಪ್ ಕೆಂಪು ತಲೆಯ ಒಂದು ಎಳೆಯ ಗುಬ್ಬಚ್ಚಿ. ಒಂದು ವರ್ಷ ವಯಸ್ಸಾದಾಗ ಅದು ಚಿರ್ಪಿಯನ್ನು ಮದುವೆಯಾಗಿ ಸ್ವಂತ ಮನೆ ಮಾಡಲು ನಿರ್ಧರಿಸಿತು.

"ಅದು ಸರಿ. ಆದರೆ ಎಲ್ಲಿ ನಾವು ಗೂಡು ಕಟ್ಟೋದು? ನಮ್ಮ ತೋಟದ ಮರಗಳ ಪೊಟರೆಗಳಾವುವೂ ಖಾಲಿಯೇ ಇಲ್ಲವಲ್ಲ?" ಎಂದು ಚಿರ್ಪಿ ಗುಬ್ಬಚ್ಚಿ ಭಾಷೆಯಲ್ಲಿ ಕೇಳಿತು.

"ಪರವಾಗಿಲ್ಲ. ನೀನೇನೂ ಚಿಂತಿಸ ಬೇಕಾಗಿಲ್ಲ!" ಎಂದು ಚಿರ್ಪ್ ದರ್ಪದಿಂದ ಅದೇ ಗುಬ್ಬಚ್ಚಿ ಭಾಷೆ ಯಲ್ಲಿ ಉತ್ತರಿಸಿತು. "ನಮ್ಮ ನೆರೆಯವರನ್ನು ಹೊಡೆದಟ್ಟಿ ಆ ಪೊಟರೆಯನ್ನು ನಾವೇ ತೆಗೆದುಕೊಂಡ ರಾಯಿತು."

ಚಿರ್ಪ್‌ಗೆ ಕಾದಾಡುವುದು ಅಂದರೆ ಪ್ರಾಣ. ತಾನೆಂಥ ಕೆಚ್ಚೆದೆಯವ ಅಂತ ಚಿರ್ಪಿ ಮುಂದೆ ತೋರಿಸಿ ಕೊಳ್ಳಬೇಕು ಅಂತಲೂ ಅದಕ್ಕೆ ತುಂಬ ಆಸೆ ಇತ್ತು. ಈಗ ಈ ಅವಕಾಶ ಸಿಕ್ಕಿದ್ದೇ ಮುನ್ನುಗ್ಗಿತು. ಅದರ ಎಳೆಯ ನಾಚಿಕೆಯ ಹೆಂಡತಿ ಅದನ್ನು ತಡೆಯುವ ಮುನ್ನವೇ ಅದು ದೊಡ್ಡ ಬೆಟ್ಟದ ಆ್ಯಷ್ ಮರದ ಮೇಲಕ್ಕೆ ಹಾರಿ ಹೋಯಿತು. ಆ ಮರದಲ್ಲೊಂದು ಸೊಗಸಾದ ಪೊಟರೆಯಿತ್ತು. ಅದರಲ್ಲಿ ಇನ್ನೊಂದು ಎಳೆಯ ಗುಬ್ಬಚ್ಚಿ ವಾಸವಾಗಿತ್ತು.

ಆ ಪೊಟರೆಯ ಮಾಲೀಕ ಮನೆಯಲ್ಲಿರಲಿಲ್ಲ. ಚಿರ್ಪ್ ತನ್ನಲ್ಲೇ ಹೇಳಿಕೊಂಡಿತು: "ನಾನು ಈ ಪೊಟರೆ ಯೊಳಕ್ಕೆ ಹೋಗಿ ಕುಳಿತುಕೊಂಡು ಬಿಡುತ್ತೇನೆ. ಅದರ ಮಾಲೀಕ ಬಂದಾಗ ಅವನು ನನ್ನ ಮನೆಯನ್ನು ನನ್ನಿಂದ ಕಿತ್ತುಕೊಳ್ಳಲು ಯತ್ನಿಸುತ್ತಿದ್ದಾನೆ ಅಂತ ಕಿರುಚುತ್ತೇನೆ. ಆಗ ಹಿರಿಯ ಗುಬ್ಬಚ್ಚಿಗಳೆಲ್ಲ ನನ್ನ ಸಹಾ ಯಕ್ಕೆ ಬರುತ್ತವೆ. ನಾವೆಲ್ಲ ಸೇರಿ ಅದಕ್ಕೆ ಚೆನ್ನಾಗಿ ಮಟ್ಟ ಹಾಕಿದರಾಯಿತು!"

ಆದರೆ ಅದು ಒಂದು ವಿಷಯ ಮರೆತಿತ್ತು. ಅದರ ಆ ನೆರೆಯ ಗುಬ್ಬಚ್ಚಿಗೂ ಆಗಲೇ ಮದುವೆಯಾಗಿತ್ತು ಮತ್ತು ಅದರ ಹೆಂಡತಿ ಈಗ ಐದು ದಿನಗಳಿಂದ ಆ ಪೊಟರೆಯಲ್ಲಿ ಗೂಡು ಕಟ್ಟುವ ಕೆಲಸದಲ್ಲಿ ನಿರತವಾಗಿದ್ದಿತು, ಅನ್ನುವುದನ್ನು ಅದು ಮರೆತಿತ್ತು.

ಹಾಗಾಗಿ ಚಿರ್ಪ್ ಆ ಪೊಟರೆಯೊಳಕ್ಕೆ ತನ್ನ ತಲೆ ತೂರಿಸಿದಾಗ ಅದರ ಮೂಗಿನ ಮೇಲೆ ನೋವಾಗುವಂತೆ ಕೊಕ್ಕಿನ ಚುಚ್ಚು ಪೆಟ್ಟು ಬಿತ್ತು. ಅದು ಥಟಕ್ಕನೆ ಹಿಂದಕ್ಕೆ ಚಿಮ್ಮಿತು. ಹಿಂದಿನಿಂದ ಆ ಗೂಡಿನ ಯಜಮಾನ ಹಕ್ಕಿಯೇ ಬಂದು ಅದರ ಮೇಲೆ ದಾಳಿ ಮಾಡ ತೊಡಗಿತು. ಗಟ್ಟಿಯಾಗಿ ಕಿರುಚಾಡುತ್ತ ಅವು ಗಾಳಿಯಲ್ಲಿ ಕದನವಾಡಿದವು, ನೆಲದ ಮೇಲೆ ಬಿದ್ದವು, ಗುಂಡಿಯೊಳಕ್ಕೆ ಉರುಳಿಕೊಂಡು ಹೋದವು.

ಚಿರ್ಪ್ ಭಾರಿ ಹೋರಾಟಗಾರನಾಗಿತ್ತು. ಅದರ ವಿರೋಧಿ ಆಗಲೇ ನಿಶ್ಶಕ್ತನಾಗ ತೊಡಗಿತು.

ಈ ಶಬ್ದ ಕೇಳಿ ತೋಟದಲ್ಲಿದ್ದ ಹಿರಿಯ ಗುಬ್ಬಚ್ಚಿಗಳೆಲ್ಲ ಓಡೋಡಿ ಬಂದವು. ಯಾರು ಸರಿ ಯಾರು ತಪ್ಪು ಅಂತ ಅವಕ್ಕೆ ತಿಳಿಯೋದೇನೂ ಕಷ್ಟವಾಗಲಿಲ್ಲ. ಚಿರ್ಪ್‌ನನ್ನು ಎಷ್ಟು ಜೋರಾಗಿ ಥಳಿಸಿದವೆಂದರೆ ಅದಕ್ಕೆ ಜೀವಸಹಿತ ಓಡಿ ಹೋಗುವುದೇ ಕಷ್ಟವಾಯಿತು.

ಅದು ಹೇಗೋ ಅಂತೂ ಒಂದು ಪೊದೆಗಳ ರಾಶಿಯ ಮಧ್ಯೆ ಬಂದು ಬಿದ್ದಿತು. ಅಲ್ಲಿಗೆ ಅದು ಹಿಂದೆಂದೂ ಬಂದಿರಲಿಲ್ಲ. ಅದರ ಮೈಯೆಲ್ಲ ನೋಯುತ್ತಿತ್ತು.

ಚಿರ್ಪಿ ಅದರ ಪಕ್ಕದಲ್ಲೇ ಬಂದು ಕುಳಿತುಕೊಂಡಿತು. ಪಾಪ, ಅದು ತುಂಬ ಹೆದರಿ ತತ್ತರಿಸುತ್ತಿತ್ತು.

"ನೋಡು, ನೀನು ಸುಮ್ಮನೆ ಜಗಳ ಆಡಿಬಿಟ್ಟೆ. ಈಗ ನಾವು ಮತ್ತೆ ನಮ್ಮ ತೋಟಕ್ಕೆ ಎಂದೂ



ಹೋಗುವುದು ಸಾಧ್ಯವಿಲ್ಲ !" ಎಂದದು ಎಷ್ಟು ಹೃದಯವಿದ್ರಾವಕವಾಗಿ ಹೇಳಿತೆಂದರೆ ಚಿರ್ಪ್ ಇನ್ನೇನು ಅಳುವುದರಲ್ಲಿತ್ತು – ಗುಬ್ಬಚ್ಚಿಗಳು ಅಳುವುದು ಸಾಧ್ಯವಿದ್ದಿದ್ದಲ್ಲಿ ! "ಈಗ ನಾವು ನಮ್ಮ ಮೊಟ್ಟೆಗಳನ್ನು ಎಲ್ಲಿ ಇಡುವುದು, ಎಲ್ಲಿ ಮರಿ ಮಾಡುವುದು ?"

ಅದು ನಿಜ, ಈಗ ಚಿರ್ಪ್ ಹಿರಿಯ ಗುಬ್ಬಚ್ಚಿಗಳ ಕಣ್ಣಿಗೆ ಬೀಳಲು ಸಾಧ್ಯವಿರಲಿಲ್ಲ. ಕಂಡರೆ ಅವು ಅದನ್ನು ಕುಕ್ಕಿ ಸಾಯಿಸುತ್ತಿದ್ದವು. ಇದು ಚಿರ್ಪ್‌ಗೆ ತಿಳಿದಿತ್ತು. ಆದರೂ ತಾನು ಹೆದರಿರುವುದಾಗಿ ಚಿರ್ಪಿ ಮುಂದೆ ತೋರಿಸಿಕೊಳ್ಳಲು ಅದಕ್ಕೆ ಇಷ್ಟವಿರಲಿಲ್ಲ. ಆದ್ದರಿಂದ ಅದು ತನ್ನ ಕೊಕ್ಕಿನಿಂದ ತನ್ನ ಕೆದರಿದ ಪುಕ್ಕಗಳನ್ನೆಲ್ಲ ಸರಿಪಡಿಸಿಕೊಂಡು, ನೆಟ್ಟಗೆ ನಿಂತು, ತನ್ನ ಹಳೆಯ ನಿಶ್ಚಿಂತೆಯ ಧ್ವನಿಯಲ್ಲೇ ಹೇಳಿತು:

"ಪರವಾಗಿಲ್ಲ ! ಇನ್ನೊಂದು ಜಾಗ ಹುಡುಕಿಕೊಂಡರಾಯಿತು. ಇದಕ್ಕೂ ಹೆಚ್ಚು ಉತ್ತಮವಾದ ಜಾಗ ವನ್ನೇ ಹುಡುಕಿಕೊಳ್ಳೋಣ !"

ಹೀಗೆ ಅವು ವಾಸಿಸಲು ಒಂದು ಹೊಸ ಜಾಗ ಹುಡುಕಿಕೊಂಡು ಹೊರಟವು.

ಆ ಪೊದೆಗಳ ಹಿಂದೆಯೇ ಒಂದು ಸಂತಸದ ನೀಲಿ ನದಿ ಹರಿಯುತ್ತಿತ್ತು. ನದಿಯ ಎದುರು ದಡದಲ್ಲಿ ಒಂದು ತುಂಬ ಎತ್ತರದ ಗುಡ್ಡವಿದ್ದಿತು. ಅದು ಕೆಂಪು ಜೇಡಿಮಣ್ಣು ಹಾಗೂ ಮರಳಿನ ಗುಡ್ಡವಾಗಿತ್ತು. ಈ ಗುಡ್ಡದ ತುದಿಯಲ್ಲಿ ಬೇಕಾದಷ್ಟು ಪುಟ್ಟ ಪುಟ್ಟ ತೂತುಗಳೂ ಬಿಲಗಳೂ ಇದ್ದವು. ದೊಡ್ಡ ತೂತುಗಳ ಮುಂದೆ ಮ್ಯಾಗ್‌ಪೈ ಹಾಗೂ ವಿಂಡ್‌ಹೋವರ್ ಹಕ್ಕಿಗಳು ಜೋಡಿ ಜೋಡಿ ಕುಳಿತಿದ್ದವು. ಸಣ್ಣ ತೂತು ಗಳಲ್ಲಿ ಸ್ವಾಲೋ ಹಕ್ಕಿಗಳು ಒಳಕ್ಕೂ ಹೊರಕ್ಕೂ ಬಂದು ಹೋಗುತ್ತಿದ್ದವು.

"ಅಲ್ಲಿ ನೋಡು, ಅವೆಲ್ಲ ಎಷ್ಟು ಆನಂದದಿಂದ ಬಾಳುತ್ತಿವೆ !" ಚಿರ್ಪಿ ಹೇಳಿತು, ಅತ್ತ ಇತ್ತ ಧಾವಿಸಿ ಕೊಂಡು ಅಡ್ಡಾಡುತ್ತಿದ್ದ ಸ್ವಾಲೋ ಹಕ್ಕಿಗಳ ಹಿಂಡನ್ನು ತೋರಿಸುತ್ತ. "ನಾವೂ ನಮ್ಮ ಮನೆಯನ್ನು ಇಲ್ಲೇ ಕಟ್ಟಿಕೊಳ್ಳೋಣ."

ಚಿರ್ಪ್ ಅಂಜುತ್ತಂಜುತ್ತ ಮ್ಯಾಗ್‌ಪೈ ಹಾಗೂ ವಿಂಡ್‌ಹೋವರ್ ಹಕ್ಕಿಗಳತ್ತ ನೋಡಿತು. "ಸ್ವಾಲೋ ಹಕ್ಕಿಗಳಾದರೆ ಪರವಾಗಿಲ್ಲ. ಅವು ಮರಳಿನಲ್ಲಿ ತಮ್ಮ ಸ್ವಂತ ಗೂಡುಗಳನ್ನು ತಾವೇ ಕೊರೆದು ನಿರ್ಮಿಸಿ ಕೊಳ್ಳುತ್ತವೆ. ಆದರೆ ನಾನೇನು ಮಾಡಬೇಕು ? ಬೇರೆಯವರ ಗೂಡು ಕಿತ್ತುಕೊಳ್ಳಲು ಮತ್ತೆ ಹೋರಾಟ ಶುರು ಮಾಡಬೇಕೆ ?" ಹೋರಾಟದ ವಿಚಾರ ಬಂದುದೇ ಅದರ ಮೈಯೆಲ್ಲ ಮತ್ತೆ ನೋಯ ತೊಡಗಿತು.

"ಉಹೂಂ. ನನಗೆ ಈ ಜಾಗ ಇಷ್ಟವಿಲ್ಲ. ಇಲ್ಲಿ ತುಂಬ ಗದ್ದಲ" ಎಂದಿತು ಅದು.

ಅವು ಮುಂದಕ್ಕೆ ಹಾರಿಹೋದವು.

ಅವು ಒಂದು ತೋಪಿಗೆ ಬಂದವು. ಈ ತೋಪಿನ ಆಚೆ ಒಂದು ಸಣ್ಣ ಮನೆ ಮತ್ತು ಒಂದು ಕಣಜ ಕಂಡುಬಂದವು.

ಚಿರ್ಪ್ ಮತ್ತು ಚಿರ್ಪಿ ಕಣಜದ ಮೇಲ್ಚಾವಣಿಯ ಮೇಲೆ ಹೋಗಿ ಕುಳಿತವು. ಅಲ್ಲಿ ಚಿರ್ಪ್‌ನ ಗಮ ನಕ್ಕೆ ಬಂದ ಮೊದಲ ಸಂಗತಿಯೆಂದರೆ – ಸುತ್ತಮುತ್ತ ಸ್ವಾಲೋ ಹಕ್ಕಿಗಳಾಗಲೀ ಗುಬ್ಬಚ್ಚಿಗಳಾಗಲೀ ಇಲ್ಲ ದಿದ್ದುದು.

"ಇಲ್ಲಿ ವಾಸಿಸುವುದಕ್ಕೆ ಚೆನ್ನಾಗಿರುತ್ತೆ !" ಚಿರ್ಪ್ ಸಂತೋಷದಿಂದ ಹೇಳಿತು. "ನೋಡಿದೆಯಾ, ಇಲ್ಲಿ ಅಂಗಳದಲ್ಲೆಲ್ಲ ಎಷ್ಟೊಂದು ಬೀಜಗಳೂ ತಿಂಡಿ ಚೂರುಪಾರುಗಳೂ ಬಿದ್ದಿವೆ. ಇಲ್ಲಿ ನಾವೇ ರಾಜರ ಹಾಗೆ ಇರೋಣ. ಬೇರೆ ಯಾರನ್ನೂ ಇಲ್ಲಿಗೆ ಬರುವುದಕ್ಕೆ ಬಿಡಕೂಡದು."

"ಓಹ್, ಚಿರ್ಪ್ ! ಅಲ್ಲಿ ನೋಡು, ಮನೆಯ ದ್ವಾರಮಂಟಪದಲ್ಲಿ ಎಂಥ ಭಯಂಕರವಾದುದು ಏನೋ

ಮಲಗಿದೆ!" ಚಿರ್ಪಿ ಭಯದಿಂದ ಕೂಡಿದ ಪಿಸುಧ್ವನಿಯಲ್ಲಿ ಹೇಳಿತು.

ನಿಜವೇ. ದ್ವಾರಮಂಟಪದಲ್ಲಿ ನಸುಕೆಂಪು ಹಾಗೂ ಹಳದಿ ಬಣ್ಣದ ಒಂದು ದಡೂತಿ ಬೆಕ್ಕು ಮಲಗಿತ್ತು.

"ಪರವಾಗಿಲ್ಲ!" ಚಿರ್ಪ್ ಜಂಭದಿಂದ ಹೇಳಿತು. "ಅದೇನು ಮಹಾ ಮಾಡುತ್ತೆ ನಮಗೆ? ನೋಡು ನಾನೀಗ ಅದಕ್ಕೆ ಏನು ಮಾಡ್ತೀನಿ ಅಂತ!"

ಅದು ಮೇಲ್ಚಾವಣಿಯಿಂದ ಕೆಳಕ್ಕೆ ಹಾರಿ ನೇರವಾಗಿ ಆ ಬೆಕ್ಕಿನ ಕಡೆಗೇ ಹೋಯಿತು. ಎಷ್ಟು ನಿರ್ಲಕ್ಷ್ಯದಿಂದ ಹೋಯಿತೆಂದರೆ ಅದನ್ನು ಕಂಡು ಚಿರ್ಪಿ ಗಾಬರಿಯಿಂದ ಕೂಗಿಕೊಂಡಿತು.

ಬೆಕ್ಕಿಗೆ ಕಾಣದಂತೆ ಹೋಗಿ ಬೆಕ್ಕಿನ ಬಾಯಿಯ ಬಳಿಯೇ ಇದ್ದ ಬ್ರೆಡ್ಡಿನ ಚೂರೊಂದನ್ನು ಚಿರ್ಪ್ ತುಂಬ ಚುರುಕಾಗಿ ಎತ್ತಿಕೊಂಡು ಮತ್ತೆ ಬೇಗನೆ ಚಾವಣಿಯ ಮೇಲಕ್ಕೆ ಹಾರಿ ಬಂದಿತು.

ಬೆಕ್ಕು ಚಲಿಸಲೂ ಇಲ್ಲ. ಸುಮ್ಮನೆ ಒಂದು ಕಣ್ಣನ್ನು ತೆರೆದು ಆ ದುರಹಂಕಾರದ ಗುಬ್ಬಚ್ಚಿಯತ್ತ ಒಮ್ಮೆ ತೀವ್ರ ನೋಟ ಬೀರಿತಷ್ಟೆ.

"ನೋಡಿದೆಯಾ ನಾನು ಏನು ಮಾಡಿದೆ ಅಂತ? ಮತ್ತೆ ನೀನು ಸುಮ್ಮನೆ ಹೆದರುತ್ತೀಯಲ್ಲ!" ಎಂದು ಚಿರ್ಪ್ ಜಂಭದಿಂದ ಕುಣಿದಾಡುತ್ತ ಚಿರ್ಪಿಗೆ ಹೇಳಿತು.



ಚಿರ್ಪಿಗೆ ಜಗಳವಾಡಲು ಇಷ್ಟವಿರಲಿಲ್ಲ. ಅದು ಸುಮ್ಮನಿದ್ದಿತು. ಅನಂತರ ಎರಡು ಗುಬ್ಬಚ್ಚಿಗಳೂ ತಮ್ಮ ಗೂಡು ಕಟ್ಟಲು ಉತ್ತಮ ಸ್ಥಳಕ್ಕಾಗಿ ಹುಡುಕ ತೊಡಗಿದವು. ಅಲ್ಲಿದ್ದ ಕಣಜದ ಮೇಲ್ಛಾವಣಿಯ ಕೆಳಗೇ ದೊಡ್ಡ ಬಿರುಕೊಂದರಲ್ಲಿ ತಮ್ಮ ಗೂಡು ಕಟ್ಟಲು ನಿರ್ಧರಿಸಿದವು. ಕೂಡಲೇ ಕಾರ್ಯದಲ್ಲಿ ತೊಡಗಿದವು. ಮೊದಲು ಒಣ ಹುಲ್ಲಿನ ತುಂಡುಗಳನ್ನು ತಂದವು. ಆಮೇಲೆ ಕುದುರೆ ಬಾಲದ ಕೂದಲು, ಚಕ್ಕೆ ಹಾಗೂ ಪುಕ್ಕಗಳನ್ನು ತಂದವು.

ಒಂದು ವಾರದೊಳಗೇ ಚಿರ್ಪಿ ಮೊದಲ ಮೊಟ್ಟೆ ಇಟ್ಟಿತು. ಅದೊಂದು ಸುಂದರವಾದ ಪುಟ್ಟ ಮೊಟ್ಟೆ ಯಾಗಿತ್ತು. ಅದರ ಮೇಲುಗಡೆ ಪಾಟಲ-ಕಂದು ಬಣ್ಣದ ಮಚ್ಚೆಗಳಿದ್ದವು. ಚಿರ್ಪ್‌ಗೆ ಎಷ್ಟು ಖುಷಿಯಾಯಿ ತೆಂದರೆ ಒಂದು ಹಾಡನ್ನೇ ಕಟ್ಟಿ ಹಾಡಿತು:



ಟ್ವೀಟ್-ಟ್ವೀಟ್, ಚಿರ್ಪಿ, ಚಿರ್ಪ್ !
ಚಿರ್ಪಿ, ಚಿರ್ಪ್,
ಟ್ವೀಟ್, ಟ್ವೀಟ್, ಟ್ವೀಟ್ !



ಹಾಡಿನ ಪದಗಳಿಗೆ ಯಾವ ಅರ್ಥವೂ ಇರಲಿಲ್ಲ. ಆದರೆ ಒಟ್ಟಿನಲ್ಲಿ ಅದೊಂದು ಒಳ್ಳೆಯ ಹಾಡಾಗಿತ್ತು. ಬೇಲಿಯ ಮೇಲೆ ಕುಪ್ಪಳಿಸಿಕೊಂಡು ಹೋಗುವಾಗ ಹಾಡಿಕೊಳ್ಳಲು ಸೊಗಸಾದ ಹಾಡಾಗಿತ್ತು.

ಚಿರ್ಪಿ ಗೂಡಿನಲ್ಲಿ ಒಟ್ಟು ಆರು ಮೊಟ್ಟೆಗಳನ್ನು ಇಟ್ಟ ನಂತರ ಅವುಗಳಿಗೆ ಕಾವು ಕೊಡಲು ಕುಳಿತು ಕೊಂಡಿತು.

ಚಿರ್ಪ್ ತನ್ನ ಪತ್ನಿಗಾಗಿ ಹುಳುಗಳನ್ನೂ ನೊಣಗಳನ್ನೂ ಸಂಗ್ರಹಿಸಿ ತರಲು ಹಾರಿಹೋಯಿತು. ಏಕೆಂದರೆ ಚಿರ್ಪಿಗೆ ಈಗ ಮೃದುವಾದ ಪುಷ್ಟಿಕರವಾದ ಆಹಾರ ಅಗತ್ಯವಾಗಿತ್ತು. ಚಿರ್ಪ್ ತುಂಬ ಹೊತ್ತು ಹಿಂದಿ ರುಗಲೇ ಇಲ್ಲ. ಚಿರ್ಪಿಗೆ ಹೆದರಿಕೆ. ಘಳಿಗೆ ಘಳಿಗೆಗೂ ಹೊರಕ್ಕೆ ತಲೆ ಹಾಕಿ ನೋಡುತ್ತಿತ್ತು.

ಒಮ್ಮೆ ಅದು ಬಿರುಕಿನಿಂದ ಹೊರಕ್ಕೆ ತನ್ನ ತಲೆ ಹಾಕಿದಾಗ ಹರಡಿದ ಮೊನೆಯುಗುರುಗಳುಳ್ಳ ಪಂಜ ವೊಂದು ಅದರತ್ತ ಚಾಚಿತು. ಚಿರ್ಪಿ ಕೊಸರಾಡಿ ಬಿಡಿಸಿಕೊಂಡಿತು. ಆದರೆ ಅದರ ತಲೆಯ ಪುಕ್ಕದ ಒಂದು ಗೊಂಚಲೆಯೇ ಬೆಕ್ಕಿನ ಉಗುರುಗಳಲ್ಲಿ ಉಳಿದಿದ್ದಿತು. ಚಿರ್ಪಿ ಹೇಗೋ ಅಂತೂ ಬಚಾವಾಗಿದ್ದಿತು !

ಬೆಕ್ಕು ಚಿರ್ಪಿಯತ್ತ ದಿಟ್ಟಿಸಿ ನೋಡಿತು. ತನ್ನ ಪಂಜವನ್ನು ಬಿರುಕಿನೊಳಕ್ಕೆ ಹಾಕಿ ಇಡೀ ಗೂಡನ್ನೇ ಹೊರಕ್ಕೆ ಎಳೆದು ಹಾಕಿತು. ಬಡಪಾಯಿ ಚಿರ್ಪಿ ನಿಷ್ಫಲವಾಗಿ ಗೋಳಿಟ್ಟಿತು. ಅಷ್ಟು ಹೊತ್ತಿಗೆ ಹಿಂದಿರು

ಗಿದ ಚಿರ್ಪ್ ಬೆಕ್ಕಿನ ಮೇಲೆ ಹಾರಿಹೋಗಿ ಕುಕ್ಕಿತು. ಆದರೆ ಏನೂ ಪ್ರಯೋಜನವಾಗಲಿಲ್ಲ. ಅಲ್ಲದೆ ಯಾರೂ ಅವುಗಳ ಸಹಾಯಕ್ಕೆ ಬರಲಿಲ್ಲ. ಕಳ್ಳ ಬೆಕ್ಕು ಶಾಂತವಾಗಿ ಕುಳಿತು ಎಲ್ಲ ಆರು ಮೊಟ್ಟೆಗಳನ್ನೂ ತಿಂದು ಮುಗಿಸಿತು. ಖಾಲಿಯಾದ ಗೂಡು ಗಾಳಿಗೆ ಹಾರಿ ನೆಲದ ಮೇಲೆ ಬಿದ್ದಿತು.

ಅದೇ ದಿನ ಚಿರ್ಪ್ ಹಾಗೂ ಚಿರ್ಪಿ ಆ ಕಣಜವನ್ನು ಸದಾಕಾಲಕ್ಕೂ ಬಿಟ್ಟು ಹೋದವು. ಬೆಕ್ಕಿಗೆ ಸಿಗ ದಂತೆ ದೂರ ತೋಪೊಂದಕ್ಕೆ ಹೋದವು.

ಇಲ್ಲಿ ಅವುಗಳ ಅದೃಷ್ಟ ಚೆನ್ನಾಗಿತ್ತು. ಅವಕ್ಕೆ ಕೂಡಲೇ ಖಾಲಿಯಾದ ಮರವೊಂದರ ಪೊಟರೆ ಸಿಕ್ಕಿತು. ಮತ್ತೆ ಅವು ಒಣ ಹುಲ್ಲಿನ ಚೂರುಗಳು ಪುಕ್ಕಗಳು ಮುಂತಾದವನ್ನು ತರ ತೊಡಗಿದವು. ಒಂದು ಇಡೀ ವಾರ ಕಷ್ಟಪಟ್ಟು ದುಡಿದು ಹೊಸ ಗೂಡು ಕಟ್ಟಿದವು.

ಅವುಗಳ ನೆರೆಯಲ್ಲಿ ಫಿಂಚ್ ದಂಪತಿಗಳು, ಫ್ಲೈಕ್ಯಾಚರ್ ದಂಪತಿಗಳು, ಗೋಲ್ಡ್‌ಫಿಂಚ್ ದಂಪತಿಗಳು ವಾಸಿಸುತ್ತಿದ್ದವು. ಎಲ್ಲವೂ ತಮ್ಮ ಸ್ವಂತ ಮನೆ ಹೊಂದಿದ್ದವು. ಎಲ್ಲಕ್ಕೂ ಸಾಕುಬೇಕಾದಷ್ಟು ಆಹಾರ ಸಿಕ್ಕು





ತ್ತಿತ್ತು. ಆದರೂ ಚಿರ್ಪ್ ಅವುಗಳೊಂದಿಗೆ ಜಗಳವಾಡದೆ ಇರಲಿಲ್ಲ. ವಿನಾ ಕಾರಣ ಜಗಳ. ಜಗಳವಾಡಿ ತಾನೆಷ್ಟು ಧೈರ್ಯಶಾಲಿ, ತಾನೆಷ್ಟು ಬಲಶಾಲಿ ಅಂತ ಅವುಗಳಿಗೆ ತೋರಿಸಿಕೊಡಬೇಕೆಂದು ಚಿರ್ಪ್‌ಗೆ ಆಸೆ.

ಆದರೆ ಫಿಂಚ್ ಹಕ್ಕಿ ಚಿರ್ಪ್‌ಗಿಂತ ಹೆಚ್ಚು ಶಕ್ತಿಯುತವಾಗಿತ್ತು. ಅದು ಚಿರ್ಪ್‌ಗೆ ಒಳ್ಳೆಯ ಪಾಠ ಕಲಿಸಿತು. ಈಗ ಚಿರ್ಪ್ ತುಂಬ ಎಚ್ಚರಿಕೆಯಿಂದ ಇರ ತೊಡಗಿತು. ಅದು ಇನ್ನೆಷ್ಟು ಮಾತ್ರವೂ ಕಾಲು ಕೆರೆದು ಕಾಳಗಕ್ಕೆ ಇಳಿಯುತ್ತಿರಲಿಲ್ಲ. ನೆರೆಯವರು ತನ್ನ ಗೂಡಿನ ಮುಂದೆ ಹಾದು ಹೋದಾಗ ಚಿರ್ಪ್ ಸುಮ್ಮನೆ ತನ್ನ ಪುಕ್ಕ ಕೆದರಿಸಿಕೊಂಡು ಏನಾದರೂ ದುರಹಂಕಾರದ ಮಾತುಗಳನ್ನಾಡುತ್ತಿತ್ತು, ಅಷ್ಟೇ. ಆದರೆ ಅದು ಆ ಹಕ್ಕಿಗಳನ್ನೇನೂ ಕೆರಳಿಸುತ್ತಿರಲಿಲ್ಲ. ಏಕೆಂದರೆ ಅವೇ ಎಷ್ಟೋ ವೇಳೆ ಇತರ ಹಕ್ಕಿಗಳ ಮುಂದೆ ತಮ್ಮ ಧೈರ್ಯ ಶೌರ್ಯಗಳನ್ನು ಹೊಗಳಿ ಹೇಳಿಕೊಳ್ಳಲು ಇಷ್ಟಪಡುತ್ತಿದ್ದವು.

ಒಂದು ದಿನ ಇದ್ದಕ್ಕಿದ್ದಂತೆ ಫಿಂಚ್ ಹಕ್ಕಿ ಗಾಬರಿಯಿಂದ ಕೂಗಿಕೊಳ್ಳ ತೊಡಗಿತು. ಅದು ದೂರದಲ್ಲಿ

ವಾಸವಾಗಿದ್ದರೂ ಅದರ ಗಾಬರಿಯ ಕೂಗು ಚಿರ್ಪ್‌ಗೆ ಕೇಳಿಸಿತು: ರ್‍ಯೂಮ್-ಪಿಂಕ್-ಪಿಂಕ್ ! ರ್‍ಯೂಮ್-ಪಿಂಕ್-ಪಿಂಕ್ !

"ಚಿರ್ಪಿ, ಬಾ ಇಲ್ಲಿ ಬೇಗ !" ಚಿರ್ಪ್ ಕೂಗಿ ಕರೆಯಿತು. "ಕೇಳಿಸಿತಾ ಫಿಂಚ್ ಹಕ್ಕಿಯ ಗಾಬರಿಯ ಕೂಗು ? ಏನೋ ಅಪಾಯ ಬರುತ್ತಿದೆ !"

ನಿಜಕ್ಕೂ, ಭೀತಿಗೊಳಿಸುವಂತಹುದೇನೋ ಅವುಗಳತ್ತ ಬರುತ್ತಿದ್ದಿತು. ಈಗ ಗೋಲ್ಡ್‌ಫಿಂಚ್ ಹಕ್ಕಿಯೂ ಗಾಬರಿಯಿಂದ ಕೂಗ ತೊಡಗಿತು. ಆಮೇಲೆ ಫ್ಲೈಕ್ಯಾಚರ್ ಹಕ್ಕಿಯೂ ಕೂಗಿಕೊಳ್ಳ ತೊಡಗಿತು. ಫ್ಲೈಕ್ಯಾಚರ್ ಶತ್ರುವನ್ನು ಕಂಡಿತು ಅಂದ ಮೇಲೆ ಶತ್ರು ತೀರ ಹತ್ತಿರವೇ ಬಂದಿರಬೇಕು, ಏಕೆಂದರೆ, ಫ್ಲೈಕ್ಯಾಚರ್ ಹಕ್ಕಿಯ ಮನೆ ಚಿರ್ಪ್ ಮನೆಯಿಂದ ನಾಲ್ಕು ಮರಗಳ ದೂರವಷ್ಟೆ ಇದ್ದಿತು.

ಚಿರ್ಪಿ ಮರದ ಪೊಟರೆಯಿಂದ ಹೊರ ಹಾರಿ ಬಂದು ಕೊಂಬೆಯ ಮೇಲೆ ತನ್ನ ಗಂಡನ ಪಕ್ಕದಲ್ಲಿ ಕುಳಿತಿತು. ಅವುಗಳ ನೆರೆಯವರು ಅವುಗಳಿಗೆ ಬರಲಿದ್ದ ಅಪಾಯದ ಎಚ್ಚರಿಕೆ ನೀಡಿದ್ದವು. ಹಾಗಾಗಿ ಅವು ಈಗ ಏನೇ ಬರಲಿ ಎದುರಿಸಲು ಸಿದ್ಧವಿದ್ದವು.

ಅವು ತುಪ್ಪುಳ ತುಂಬಿದ ಕೊಬ್ಬಿ ಬೆಳೆದ ಜಿಂಜರ್ ಬೆಕ್ಕಿನ ಮೈಯನ್ನು ಪೊದೆಗಳ ಮಧ್ಯೆ ದೂರದಿಂದಲೇ ಕಂಡವು. ಬೇಗನೆಯೇ ಅವುಗಳ ಮಾರಕ ಶತ್ರು ಟಾಮ್ ಬೆಕ್ಕು ಪೊದೆಗಳ ಮಧ್ಯದಿಂದ ಬಯಲಿನಲ್ಲಿ ಕಾಣಿಸಿಕೊಂಡಿತು. ಗುಬ್ಬಚ್ಚಿಗಳಿಗೆ ಅವುಗಳ ನೆರೆಯ ಹಕ್ಕಿಗಳು ಎಚ್ಚರಿಕೆ ನೀಡಿದ್ದವು ಅನ್ನುವುದನ್ನು ಟಾಮ್ ಬೆಕ್ಕು ಕಂಡುಕೊಂಡಿತು. ಹಾಗಾಗಿ ಈಗ ಚಿರ್ಪಿಯನ್ನು ಗೂಡಿನಲ್ಲೇ ಹಿಡಿಯುವುದು ಸಾಧ್ಯವಿರಲಿಲ್ಲ. ಅದಕ್ಕೆ ಕೋಪ ಬಂದಿತು.

ಅದರ ಬಾಲದ ತುದಿ ಇದ್ದಕ್ಕಿದ್ದಂತೆ ಹುಲ್ಲಿನಲ್ಲಿ ತುಡಿಯ ತೊಡಗಿತು. ಅದರ ಕಣ್ಣುಗಳು ಕಿರಿದಾದವು. ಅದಕ್ಕೆ ಗುಬ್ಬಚ್ಚಿಗಳ ಪೊಟರೆ ಕಂಡಿದ್ದಿರಬೇಕು. ಬೆಳಗಿನ ಉಪಾಹಾರಕ್ಕೆ ಆರು ಗುಬ್ಬಚ್ಚಿ ಮೊಟ್ಟೆಗಳು ಚೆನ್ನಾಗಿಯೇ ಇರುತ್ತೆ. ಅದು ತುಟಿ ನೆಕ್ಕಿಕೊಂಡಿತು. ಮರ ಹತ್ತಿತು. ಪೊಟರೆಯ ಬಳಿ ಹೋಯಿತು.





ಚಿರ್ಪ್ ಮತ್ತು ಚಿರ್ಪಿ ಇಡೀ ತೋಪಿಗೇ ಕೇಳುವಂತೆ ಗಟ್ಟಿಯಾಗಿ ಚೀರಿದವು. ಮತ್ತೆ ಯಾರೂ ಅವುಗಳ ನೆರವಿಗೆ ಬರಲಿಲ್ಲ. ಅವುಗಳ ನೆರೆಯ ಹಕ್ಕಿಗಳು ತಮ್ಮ ತಮ್ಮ ಗೂಡುಗಳ ಬಳಿಯೇ ಇದ್ದುಕೊಂಡು ಅಂಜಿಕೆಯಿಂದ ಗಟ್ಟಿಯಾಗಿ ಚೀರುತ್ತಿದ್ದವು. ಪ್ರತಿಯೊಂದೂ ತನ್ನ ಮನೆಯ ಸುಭದ್ರತೆಯ ಬಗೆಗೇ ಚಿಂತಿಸುತ್ತಿದ್ದಿತು.

ಟಾಮ್ ಬೆಕ್ಕು ತನ್ನ ಮೊನೆಯುಗುರುಗಳನ್ನು ಗೂಡಿನ ಒಳ ಹಾಕಿ ಅದನ್ನು ಹೊರಕ್ಕೆ ಎಳೆಯಿತು.

ಆದರೆ ಈ ಬಾರಿ ಬೆಕ್ಕು ತುಂಬ ಬೇಗನೆಯೇ ಬಂದು ಬಿಟ್ಟಿದ್ದಿತು – ಚಿರ್ಪಿ ಇನ್ನೂ ಮೊಟ್ಟೆಗಳನ್ನು ಇಟ್ಟೇ ಇರಲಿಲ್ಲ.

ಮೊಟ್ಟೆಗಳನ್ನು ಕಾಣದೆ ಬೆಕ್ಕು ಬೇಸರಗೊಂಡು ಗೂಡನ್ನು ಕೆಳಕ್ಕೆ ಒಗೆಯಿತು. ತಾನೇ ಕೆಳಕ್ಕೆ ಇಳಿದು ಬಂದಿತು. ಅದು ಹೊರಟು ಹೋಗುತ್ತಿದ್ದಂತೆ ಗುಬ್ಬಚ್ಚಿಗಳು ಚೀರುತ್ತ ಅದನ್ನು ಶಪಿಸಿದವು.

ಪೊದೆಗಳ ಬಳಿ ಬಂದಾಗ ಅದು ನಿಂತಿತು, ಹಿಂದೆ ತಿರುಗಿ ನೋಡಿತು. ಅದು ಹೀಗೆ ಹೇಳಲು ಬಯಸಿದಂತಿತ್ತು:

"ಸ್ವಲ್ಪ ತಾಳಿ, ಪ್ರೀತಿಯ ಹಕ್ಕಿಗಳೇ, ತಾಳಿ! ತಿರುಗ ಬಂದು ನಿಮ್ಮನ್ನು ಹಿಡೀತೀನಿ. ಹೊಸ ಗೂಡನ್ನು ಎಲ್ಲಿ ಬೇಕಾದರೂ ಕಟ್ಟಿಕೊಳ್ಳಿ. ನನಗೆ ತಿಳಿದುಹೋಗುತ್ತೆ. ಮೊಟ್ಟೆಗಳನ್ನಿಟ್ಟು ಮರಿ ಮಾಡಿ. ನಾನು ತಕ್ಷಣವೇ ಬಂದು ಎಲ್ಲವನ್ನೂ ತಿಂದು ಮುಗಿಸುತ್ತೇನೆ. ಅಷ್ಟೇ ಅಲ್ಲ ನಿಮ್ಮನ್ನೂ ಮುಗಿಸಿ ಬಿಡುತ್ತೇನೆ!" ಅದು ಕೋಪದಿಂದ ಹೇಗೆ ಗುರುಗುಟ್ಟಿತೆಂದರೆ ಚಿರ್ಪಿ ಭಯದಿಂದ ನಡುಗಿತು.

ಟಾಮ್ ಬೆಕ್ಕು ಹೊರಟು ಹೋಯಿತು. ಚಿರ್ಪ್ ಮತ್ತು ಚಿರ್ಪಿ ಹಿಂದೆ ಉಳಿದವು. ತಮ್ಮ ಗೂಡು ನಾಶವಾಯಿತಲ್ಲ ಎಂದು ದುಃಖಿಸ ತೊಡಗಿದವು.

"ಚಿರ್ಪ್, ನನಗೆ ಅನಿಸುತ್ತೆ, ಇನ್ನು ಕೆಲವೇ ದಿನಗಳಲ್ಲಿ ನಾನು ಮೊಟ್ಟೆ ಇಡುತ್ತೀನಿ ಅಂತ" ಎಂದಿತು ಚಿರ್ಪಿ ಕೊನೆಗೆ. "ಬೇಗ ಹೋಗಿ ನದಿಯಿಂದ ಆ ಕಡೆಗೆ ಎಲ್ಲಾದರೂ ವಾಸಮಾಡಲು ಜಾಗ ಕಂಡುಹಿಡಿಯೋಣ. ಅಲ್ಲಾದರೆ ಈ ಬೆಕ್ಕಿನ ಕಾಟ ಇರೊಲ್ಲ."

ಆದರೆ ಆ ನದಿಗೆ ಅಡ್ಡಲಾಗಿ ಒಂದು ಸೇತುವೆ ಇದ್ದಿತು ಮತ್ತು ಟಾಮ್ ಬೆಕ್ಕು ಆಗಾಗ್ಗೆ ಈ ಸೇತುವೆಯ ಮೂಲಕ ನದಿಯ ಆ ಕಡೆಗೂ ಹೋಗುತ್ತಿದ್ದಿತು, ಅನ್ನುವುದು ಚಿರ್ಪಿಗೆ ತಿಳಿದಿರಲಿಲ್ಲ. ಚಿರ್ಪ್‌ಗೂ ಈ ವಿಷಯ ತಿಳಿದಿರಲಿಲ್ಲ.

"ಸರಿ. ಬಾ ಹೋಗೋಣ ಅಲ್ಲಿಗೆ" ಎಂದಿತು ಅದು.

ಎರಡೂ ಹಾರಿಹೋದವು.

ಬೇಗನೆಯೇ ಅವು ನದಿಯ ಅತ್ತ ಕಡೆ ಇದ್ದ ಕೆಂಪು ಗುಡ್ಡಕ್ಕೆ ಬಂದವು.

"ಬನ್ನಿ. ನಮ್ಮ ಜೊತೆ ವಾಸಮಾಡಿ!" ಎಂದು ಸ್ವಾಲೋ ಹಕ್ಕಿಗಳು ತಮ್ಮ ಭಾಷೆಯಲ್ಲೇ ಈ ಗುಬ್ಬಚ್ಚಿಗಳಿಗೆ ಕೂಗಿ ಹೇಳಿದವು. "ನಾವೆಲ್ಲ ಈ ಕೆಂಪು ಗುಡ್ಡದಲ್ಲಿ ತುಂಬ ಸ್ನೇಹದಿಂದ ಆನಂದದಿಂದ ಒಂದೇ ಕುಟುಂಬದವರಂತೆ ವಾಸಮಾಡುತ್ತಿದ್ದೇವೆ."



"ಈಗ ಹೀಗೆ ಹೇಳ್ತೀರ. ಸ್ವಲ್ಪ ದಿನಗಳಾದ ಮೇಲೆ ಜಗಳ ಶುರು ಮಾಡ್ತೀರ" ಚಿರ್ಪ್ ಮುನಿಸಿನಿಂದ ಹೇಳಿತು.

"ಯಾಕೆ ಜಗಳ ಮಾಡಬೇಕು?" ಸ್ವಾಲೋ ಹಕ್ಕಿಗಳು ಉತ್ತರಿಸಿದವು. "ಇಲ್ಲಿ ನದಿಯ ಮೇಲೆ ಎಲ್ಲರಿಗೂ ಸಾಲುವಷ್ಟು ಸೊಳ್ಳೆಗಳೂ ಹುಳುಗಳೂ ಇವೆ. ಮತ್ತೆ ನಮ್ಮ ಈ ಕೆಂಪು ಗುಡ್ಡದಲ್ಲಿ ಬೇಕಾದಷ್ಟು ಖಾಲಿ ಬಿಲಗಳೂ ಇವೆ. ನೀವು ಯಾವುವನ್ನು ಬೇಕಾದರೂ ಆರಿಸಿಕೊಳ್ಳಬಹುದು!"

"ನೀವು ಸರಿ. ಆದರೆ ವಿಂಡ್‌ಹೋವರ್ ಹಕ್ಕಿಗಳು ಸುಮ್ಮನೆ ಇರುತ್ತವೆಯೆ? ಮತ್ತೆ ಮ್ಯಾಗ್‌ಪೈ ಹಕ್ಕಿಗಳೂ ಕಾದಾಡಲು ಬರುತ್ತವೆ ಅಲ್ಲವೆ?" ಚಿರ್ಪ್ ಅದೇ ಧಾಟಿಯಲ್ಲಿ ಮಾತು ಮುಂದುವರಿಸಿತು.

"ವಿಂಡ್‌ಹೋವರ್ ಹಕ್ಕಿಗಳು ಹೊಲಗಳಲ್ಲಿ ಮಿಡತೆಗಳನ್ನೂ ಇಲಿಮರಿಗಳನ್ನೂ ಹಿಡಿದು ತಿನ್ನುತ್ತವೆ. ಅವು ನಮ್ಮ ತಂಟೆಗೆ ಬರೋದೇ ಇಲ್ಲ. ನಾವೆಲ್ಲ ಸನ್ಮಿತ್ರರಂತೆ ವಾಸಿಸುತ್ತಿದ್ದೇವೆ."

"ಹೌದು, ಚಿರ್ಪ್! ನಾವು ಎಷ್ಟು ಜಾಗ ನೋಡಿದೆವು. ಯಾವುದೂ ಇದರಷ್ಟು ಚೆನ್ನಾಗಿರಲಿಲ್ಲ" ಚಿರ್ಪಿ ಹೇಳಿತು. "ಇಲ್ಲೇ ಇರೋಣ."

"ಸರಿ ಹಾಗಾದರೆ. ನನಗೇನಂತೆ" ಚಿರ್ಪ್ ಒಪ್ಪುವಂತೆ ಹೇಳಿತು. "ಇದ್ದು ನೋಡೋಣ. ಇಲ್ಲೇನೋ ಕೆಲವು ಖಾಲಿ ಬಿಲಗಳಿವೆ. ಮತ್ತೆ ಯಾರೂ ಹೋರಾಡೋದೂ ಇಲ್ಲ ಅಂತ ಕಾಣುತ್ತೆ."

ಅವು ದಡಕ್ಕೆ ಸಮೀಪ ಹಾರಿಹೋದವು. ನಿಜಕ್ಕೂ ವಿಂಡ್‌ಹೋವರ್ ಹಕ್ಕಿಗಳಾಗಲೀ ಮ್ಯಾಗ್‌ಪೈ ಹಕ್ಕಿಗಳಾಗಲೀ ಯಾವುವೂ ಅವುಗಳಿಗೆ ಕಾಟ ಕೊಡಲಿಲ್ಲ.

ಅವು ಖಾಲಿ ಬಿಲಗಳು ಹೇಗಿವೆ ಅಂತ ನೋಡಲು ಹೋದವು. ಎರಡು ಬಿಲಗಳು ಅವುಗಳಿಗೆ ತುಂಬ ಇಷ್ಟವಾದವು. ಅವು ಹೆಚ್ಚು ಆಳವಾಗಿರಲಿಲ್ಲ. ಅವುಗಳ ಬಾಯಿ ಅಗಲವಾಗಿತ್ತು.

ಅವುಗಳೊಂದರಲ್ಲಿ ಈ ಗುಬ್ಬಚ್ಚಿಗಳು ಗೂಡು ಕಟ್ಟಿದವು. ಅಲ್ಲಿ ಚಿರ್ಪಿ ಮೊಟ್ಟೆಗಳನ್ನಿಟ್ಟು ಮರಿ ಮಾಡಬೇಕಿದ್ದಿತು. ಅದರ ಪಕ್ಕದಲ್ಲೇ ಇದ್ದ ಇನ್ನೊಂದು ಬಿಲದಲ್ಲಿ ಚಿರ್ಪ್ ರಾತ್ರಿ ಹೊತ್ತು ಮಲಗುತ್ತಿದ್ದಿತು.

ಸ್ವಾಲೋ, ಮ್ಯಾಗ್‌ಪೈ ಹಾಗೂ ವಿಂಡ್‌ಹೋವರ್ ಹಕ್ಕಿಗಳು ಆಗಲೇ ತುಂಬ ಹಿಂದೆಯೇ ತಮ್ಮ ಮೊಟ್ಟೆಗಳನ್ನು ಮರಿ ಮಾಡಿದ್ದವು. ಈಗ ಚಿರ್ಪಿಯಷ್ಟೆ ಇನ್ನೂ ತನ್ನ ಕತ್ತಲ ಗೂಡಿನಲ್ಲಿ ಕುಳಿತು ಮೊಟ್ಟೆಗಳಿಗೆ ಕಾವು ಕೊಡುತ್ತಿದ್ದಿತು. ಚಿರ್ಪ್ ಬೆಳಗಿನಿಂದ ಸಂಜೆಯವರೆಗೂ ಎಲ್ಲೆಲ್ಲೋ ಹಾರಿಹೋಗುತ್ತ ಚಿರ್ಪಿಗೆ ರುಚಿಕರವಾದ ಪುಷ್ಟಿಕರವಾದ ಆಹಾರ ತಂದು ಕೊಡುತ್ತಿದ್ದಿತು.

ಹದಿನೈದು ದಿನಗಳು ಕಳೆದವು. ಟಾಮ್ ಬೆಕ್ಕು ಬರಲಿಲ್ಲ. ಗುಬ್ಬಚ್ಚಿಗಳು ಬೆಕ್ಕನ್ನು ಸಂಪೂರ್ಣವಾಗಿ ಮರೆತವು.

ಚಿರ್ಪ್‌ಗೆ ಮರಿಗಳನ್ನು ಕಾಣಲು ಆತುರ. ಅದಕ್ಕೆ ಕಾಯುವಷ್ಟು ತಾಳ್ಮೆಯಿಲ್ಲ. ಪ್ರತಿ ಬಾರಿ ಚಿರ್ಪಿಗೆ ಹುಳುವನ್ನೋ ನೊಣವನ್ನೋ ತಂದು ಕೊಟ್ಟಾಗಲೂ ಕೇಳುತ್ತಿತ್ತು:

"ಇನ್ನೂ ತಟ್ಟುತ್ತಿಲ್ಲವೇ?"

"ಇಲ್ಲ. ಇನ್ನೂ ಇಲ್ಲ."

"ಇನ್ನೂ ತುಂಬ ತಡವೇ?"

"ಇಲ್ಲ, ಇಲ್ಲ. ಬೇಗನೆಯೇ ಬರುತ್ತವೆ" ಚಿರ್ಪಿ ತಾಳ್ಮೆಯಿಂದ ಉತ್ತರಿಸಿತು.

ಅನಂತರ ಒಂದು ದಿನ ಚಿರ್ಪಿ ಗೂಡಿನಲ್ಲಿದ್ದಂತೆ ಚಿರ್ಪ್‌ನನ್ನು ಕರೆಯಿತು.

"ಬೇಗ ಬಾ! ಒಂದು ಆಗಲೇ ತಟ್ಟುತ್ತಿದೆ!"



ಚಿರ್ಪ್ ಓಡೋಡಿ ಬಂತು. ಮೊಟ್ಟೆಗಳೊಂದರಲ್ಲಿ ಮರಿಯು ತನ್ನ ದುರ್ಬಲವಾದ ಪುಟ್ಟ ಕೊಕ್ಕಿನಿಂದ ಮೊಟ್ಟೆಯ ಹೊರ ಆವರಣವನ್ನು ತಟ್ಟುತ್ತಿತ್ತು. ಶಬ್ದ ದುರ್ಬಲವಾಗಿತ್ತು, ಆದರೂ ಕೇಳಿಬರುತ್ತಿತ್ತು.

ಚಿರ್ಪಿಯು ಮೊಟ್ಟೆಯ ಹೊರ ಆವರಣವನ್ನು ಹಲವಾರು ಕಡೆ ಕುಕ್ಕಿ ಒಡೆದು ಒಳಗಿದ್ದ ಮರಿ ಹೊರಗೆ ಬರಲು ಸಹಾಯಮಾಡಿತು.

ಈ ಕೆಲಸ ಮುಗಿಯಲು ಕೆಲವು ನಿಮಿಷಗಳೇ ಬೇಕಾದವು. ಈಗ ಮರಿ ಮೊಟ್ಟೆಯಿಂದ ಹೊರಗೆ ಕಾಣಿಸಿಕೊಂಡಿತು. ಅದೊಂದು ತುಂಬ ಪುಟ್ಟದಾದ, ಬೋಡ ಕುರುಡು ಮರಿಯಾಗಿತ್ತು. ತಲೆ ಮಾತ್ರ ದಪ್ಪನಾಗಿತ್ತು. ಆ ತಲೆ ತುಂಬ ತುಂಬ ತೆಳುವಾದ ಕತ್ತಿನ ಮೇಲೆ ಅತ್ತ ಇತ್ತ ಉರುಳಾಡುತ್ತಿತ್ತು.

"ವಿಚಿತ್ರವಾಗಿ ಕಾಣುತ್ತೆ !" ಚಿರ್ಪ್ ಉದ್ಗರಿಸಿತು.

"ವಿಚಿತ್ರವೇನೂ ಇಲ್ಲ" ಚಿರ್ಪಿ ನೊಂದ ಧ್ವನಿಯಲ್ಲಿ ಹೇಳಿತು. "ಇದು ತುಂಬ ಸುಂದರವಾದ ಮರಿ. ಏನೇನೋ ಮಾತನಾಡುವ ಬದಲು ಸ್ವಲ್ಪ ಉಪಯುಕ್ತವಾದ ಕೆಲಸವನ್ನಾದರೂ ಮಾಡು. ಈ ಮೊಟ್ಟೆಯ ಆವರಣದ ಚೂರುಗಳನ್ನೆಲ್ಲ ಗೂಡಿನಿಂದ ಸಾಧ್ಯವಾದಷ್ಟೂ ದೂರ ಹಾಕಿ ಬಾ."

ಅವುಗಳನ್ನೆಲ್ಲ ಎತ್ತಿಕೊಂಡು ಚಿರ್ಪ್ ದೂರ ಹಾಕಿ ಬರುವ ಹೊತ್ತಿಗೆ ಆಗಲೇ ಎರಡನೆಯ ಮೊಟ್ಟೆಯಲ್ಲಿ ಮರಿ ಒಳಗಿನಿಂದ ಹೊರ ಬಂತು, ಮೂರನೆಯದು ಮೊಟ್ಟೆಯ ಆವರಣವನ್ನು ತಟ್ಟ ತೊಡಗಿತ್ತು.

ಸರಿಯಾಗಿ ಅದೇ ಘಳಿಗೆಯಲ್ಲೇ ಕೆಂಪು ಗುಡ್ಡದಾದ್ಯಂತ ಅಂಜಿಕೆಯ ಧ್ವನಿ ಕೇಳಿಬಂದಿತು.

ಗೂಡಿನಲ್ಲಿದ್ದಂತೆಯೇ ಗುಬ್ಬಚ್ಚಿಗಳು ಸ್ವಾಲೋ ಹಕ್ಕಿಗಳ ಕೀರಲು ಧ್ವನಿಯನ್ನು ಕೇಳಿಸಿಕೊಂಡವು.

ಚಿರ್ಪ್ ಹೊರಕ್ಕೆ ಹಾರಿಹೋಗಿ ಕೂಡಲೇ ಭಯಂಕರವಾದ ಸುದ್ದಿಯೊಂದಿಗೆ ಹಿಂದಿರುಗಿತು – ಟಾಮ್ ಬೆಕ್ಕು ದಡವನ್ನು ಹತ್ತಿ ಬರುತ್ತಿದ್ದಿತು.

"ಅದು ನನ್ನನ್ನು ನೋಡಿತು !" ಚಿರ್ಪ್ ಕೂಗಿ ಹೇಳಿತು. "ಇನ್ನೇನು ಇಲ್ಲಿಗೆ ಬಂದು ಬಿಡುತ್ತೆ. ನಮ್ಮನ್ನೂ ನಮ್ಮ ಮರಿಗಳನ್ನೂ ಹಿಡಿದು ಬಿಡುತ್ತೆ. ಬೇಗ ಬಾ. ಇಲ್ಲಿಂದ ಹಾರಿಹೋಗಿ ಬಿಡೋಣ !"

"ನಾನು ಬರೊಲ್ಲ" ಚಿರ್ಪಿ ದುಃಖದಿಂದ ಹೇಳಿತು. "ಮರಿಗಳನ್ನು ಬಿಟ್ಟು ಹೇಗೆ ಬರಲಿ. ಏನಾದರೂ ಸರಿ, ಇಲ್ಲೇ ಇದ್ದು ಬಿಡುತ್ತೇನೆ."



ಚಿರ್ಪ್ ಎಷ್ಟು ಸಾರಿ ಹೇಳಿದರೂ ಚಿರ್ಪಿ ತನ್ನ ನಿರ್ಧಾರವನ್ನು ಬದಲಿಸಲಿಲ್ಲ.

ಆಗ ಚಿರ್ಪ್ ತನ್ನ ಗೂಡಿನಿಂದ ಹೊರಕ್ಕೆ ಹಾರಿಹೋಗಿ ಶತ್ರುವಿನ ಮೇಲೆ ಹುಚ್ಚನಂತೆ ದಾಳಿ ಮಾಡ ತೊಡಗಿತು. ಆದರೂ ಟಾಮ್ ಬೆಕ್ಕು ಗುಡ್ಡವನ್ನು ಏರಿಕೊಂಡು ಬರುತ್ತಲೇ ಇದ್ದಿತು. ಸ್ವಾಲೋ ಹಕ್ಕಿಗಳು ಅದರ ಮೇಲೆಯೇ ಕೋಪದಿಂದ ಸುತ್ತು ಹಾಕುತ್ತಿದ್ದವು. ಮ್ಯಾಗ್‌ಪೈ ಹಾಗೂ ವಿಂಡ್‌ಹೋವರ್ ಹಕ್ಕಿಗಳೂ ಅವನ್ನು ಕೂಡಿಕೊಂಡವು. ಆದರೂ ಟಾಮ್ ಬೆಕ್ಕು ಬೇಗ ಗುಡ್ಡದ ಉಬ್ಬು ಸಾಲು ದಾಟಿ ಗುಬ್ಬಚ್ಚಿಯ ಗೂಡಿನ ಬಿಲದತ್ತ ಪಂಜ ಚಾಚಿತು.

ಈಗ ಅದು ಮಾಡಬೇಕಾಗಿದ್ದುದೆಲ್ಲ ತನ್ನ ಇನ್ನೊಂದು ಮುಂದಿನ ಪಂಜವನ್ನೂ ಮುಂದೆ ನೂಕಿ, ಚಿರ್ಪಿ, ಅದರ ಮರಿಗಳು ಹಾಗೂ ಮೊಟ್ಟೆಗಳು ಇದ್ದ ಗೂಡನ್ನು ಹೊರಗೆಳೆಯುವುದು, ಅಷ್ಟೆ ಆಗಿದ್ದಿತು.

ಆಗ ಸರಿಯಾಗಿ ವಿಂಡ್‌ಹೋವರ್ ಹಕ್ಕಿಯೊಂದು ಅದರ ಬಾಲದ ಮೇಲೆ ಕುಕ್ಕಿತು, ಇನ್ನೊಂದು ಅದರ ತಲೆಯ ಮೇಲೆ ಗಟ್ಟಿಯಾಗಿ ಕುಕ್ಕಿತು. ಎರಡು ಮ್ಯಾಗ್‌ಪೈ ಹಕ್ಕಿಗಳು ಬೆಕ್ಕಿನ ಬೆನ್ನ ಮೇಲೆ ಒಂದೇ ಸಮನಾಗಿ ಗುದ್ದುತ್ತಿದ್ದವು.

ಟಾಮ್ ಬೆಕ್ಕು ನೋವಿನಿಂದ ಬುಸುಗುಟ್ಟಿತು. ಹಕ್ಕಿಗಳನ್ನು ತನ್ನ ಮುಂದಿನ ಪಂಜಗಳಿಂದ ಹಿಡಿಯಲು

ಸುತ್ತ ತಿರುಗಿತು. ಆದರೆ ಅವು ಕೆಳಕ್ಕೆ ಹಾರಿ ತಪ್ಪಿಸಿಕೊಂಡವು. ಬೆಕ್ಕೇ ಆಯ ತಪ್ಪಿ ಕೆಳಕ್ಕೆ ಉರುಳ ತೊಡಗಿತು. ಅದಕ್ಕೆ ಹಿಡಿದುಕೊಳ್ಳಲು ಯಾವ ಆಸರೆಯೂ ಸಿಕ್ಕಲಿಲ್ಲ. ಮರಳೂ ಅದರೊಂದಿಗೆ ಜಾರುತ್ತಿತ್ತು. ಹಾಗಾಗಿ ಅದು ಇಡೀ ಕಾಲವೂ ಹೆಚ್ಚು ಹೆಚ್ಚು ವೇಗವಾಗಿ ಕೆಳಕ್ಕೆ ಉರುಳಿಕೊಂಡು ಹೋಯಿತು.

ಕಡಿದಾದ ಗುಡ್ಡದ ಕೆಳಗಿನಿಂದ ಮೇಲೇರಿ ಬರುತ್ತಿದ್ದ ಕೆಂಪು ಧೂಳಿನಲ್ಲಿ ಹಕ್ಕಿಗಳಿಗೆ ಬೆಕ್ಕು ಕಾಣಬರಲೇ ಇಲ್ಲ. ದೊಪ್ ಎಂಬ ಶಬ್ದವಷ್ಟೆ ಕೇಳಿಬಂದುದು. ಧೂಳೆಲ್ಲ ಇಳಿದ ಮೇಲೆ ಹಕ್ಕಿಗಳಿಗೆ ಟಾಮ್ ಬೆಕ್ಕಿನ ಒದ್ದೆ ಯಾದ ತಲೆ ನದಿಯ ಮಧ್ಯದಲ್ಲಿ ಏಳುತ್ತ ಮುಳುಗುತ್ತ ಇದ್ದುದು ಕಂಡುಬಂದಿತು. ಚಿರ್ಪ್ ಅದರ ಹಿಂದೆಯೇ ಹೋಗುತ್ತ ಅದನ್ನು ಒಂದೇ ಸಮನಾಗಿ ಕುಕ್ಕುತ್ತಿತ್ತು.

ಟಾಮ್ ಬೆಕ್ಕು ಹೇಗೋ ಅಂತೂ ಎದುರು ದಡಕ್ಕೆ ಈಜಿಕೊಂಡು ಹೋಗಿ ನದಿಯಿಂದ ಹೊರ ಬಂದಿತು. ಚಿರ್ಪ್ ಇನ್ನೂ ಬಿಡದೆ ಅದರ ಮೇಲೆರಗಿತು. ಅದಕ್ಕೆ ಒಂದು ಕ್ಷಣವೂ ಕಾಟ ಕೊಡದೆ ಇರಲಿಲ್ಲ. ಇದರಿಂದ ಟಾಮ್ ಬೆಕ್ಕು ಎಷ್ಟು ಬೆದರಿತೆಂದರೆ ತನ್ನನ್ನು ಕಾಡುತ್ತಿದ್ದ ಗುಬ್ಬಚ್ಚಿಯನ್ನು ಹಿಡಿಯಲು ತನ್ನ ಪಂಜ ಚಾಚುವ ಸಾಹಸವನ್ನೂ ಮಾಡದಾಯಿತು. ಅದು ತನ್ನ ಒದ್ದೆಯಾದ ಬಾಲವನ್ನು ಮುದುಡಿಕೊಂಡು ತನ್ನ ಮನೆಗೆ ಓಟ ಕಿತ್ತಿತು.

ಅದು ಕೆಂಪು ಗುಡ್ಡದ ಮೇಲೆ ಮತ್ತೆಂದೂ ಕಾಣಿಸಿಕೊಳ್ಳಲಿಲ್ಲ.





# ಮನೆಗೆ ಧಾವಿಸಿದ ಇರುವೆ

ಒಮ್ಮೆ ಒಂದು ಇರುವೆ ಒಂದು ಎತ್ತರದ ಬರ್ಚ್ ಮರದ ಮೇಲೆ ಹತ್ತಿ ಹೋಗಿ ಅಲ್ಲಿಂದ ಕೆಳಕ್ಕೆ ಬಗ್ಗಿ ನೋಡಿತು. ಎಲ್ಲವೂ ತುಂಬ ಪುಟ್ಟುಪುಟ್ಟುದಾಗಿ ಕಂಡವು. ಅದರ ಗೂಡೂ ಕಣ್ಣಿಗೂ ಕಾಣದಷ್ಟು ಚಿಕ್ಕದಾಗಿ ಕಂಡುಬಂದಿತು. ಎಲ್ಲವನ್ನೂ ನೋಡಿದ ಮೇಲೆ ಇರುವೆ ತೃಪ್ತಿಯಿಂದ ಒಂದು ಎಲೆಯ ಮೇಲೆ ಕುಳಿತು ಕೊಂಡು ತನಗೆ ತಾನೇ ಹೇಳಿಕೊಂಡಿತು: "ಇಲ್ಲಿ ಸ್ವಲ್ಪ ಹೊತ್ತು ಕುಳಿತಿದ್ದು ಆಮೇಲೆ ಇಳಿದು ಹೋಗೋಣ."

ಇರುವೆಯ ಮನೆಯಲ್ಲಿ ನಿಯಮಗಳನ್ನು ತುಂಬ ಕಟ್ಟುನಿಟ್ಟಾಗಿ ಪಾಲಿಸಲಾಗುತ್ತಿತ್ತು. ಸಂಜೆ ಸೂರ್ಯ ಮುಳುಗುತ್ತಿದ್ದಂತೆ ಎಲ್ಲ ಇರುವೆಗಳೂ ಮನೆಗೆ ಹಿಂದಿರುಗಬೇಕು. ಸೂರ್ಯ ಪೂರ್ತಿ ಮುಳುಗಿದ ಕೂಡಲೇ ಗೂಡುಗಳ ಎಲ್ಲ ಸುರಂಗಗಳನ್ನೂ ಮುಚ್ಚಲಾಗುತ್ತಿತ್ತು. ಇರುವೆಗಳೆಲ್ಲ ನಿದ್ರೆ ಹೋಗುತ್ತಿದ್ದವು. ತಡವಾಗಿ ಬಂದ ಇರುವೆ ಇಡೀ ರಾತ್ರಿ ಹೊರಗೇ ಕಳೆಯಬೇಕಾಗುತ್ತಿತ್ತು.

ಅಂದೂ ಕಾಡಿನ ಕಡೆಗೆ ಸೂರ್ಯ ಆಗಲೇ ಇಳಿಯುತ್ತಿದ್ದ. ಆದರೆ ಇರುವೆ ಇನ್ನೂ ಎಲೆಯ ಮೇಲೆ ಕುಳಿತೇ ಇತ್ತು. "ಬೇಕಾದಷ್ಟು ಸಮಯವಿದೆ. ಕೆಳಗೆ ಇಳಿದು ಹೋಗುವುದಕ್ಕೆ ಎಷ್ಟು ಮಹಾ ಕಾಲ ಬೇಕಾಗುತ್ತೆ" ಎಂದದು ತನಗೆ ತಾನೇ ಹೇಳಿಕೊಂಡಿತು.

ಅದು ಕುಳಿತಿದ್ದ ಎಲೆಯೂ ಅಂಥ ಒಳ್ಳೆಯ ಎಲೆಯೇನೂ ಆಗಿರಲಿಲ್ಲ. ಅದು ಆಗಲೇ ಹಳದಿ ಬಣ್ಣಕ್ಕೆ ತಿರುಗಿ ಒಣಗಿತ್ತು. ಆಗ ಇದ್ದಕ್ಕಿದ್ದಂತೆ ಒಮ್ಮೆ ಗಾಳಿ ಬೀಸಿತು. ಎಲೆ ಕೊಂಬೆಯಿಂದ ಕಳಚಿಕೊಂಡಿತು. ಅದು ಗಾಳಿಯಲ್ಲಿ ಹಾರಿಕೊಂಡು ಹೋಯಿತು. ಕಾಡಿನ ಮೇಲೆ, ನದಿಯ ಮೇಲೆ ಮತ್ತು ಹಳ್ಳಿಯ ಮೇಲೂ ದೂರ ಹಾರಿಕೊಂಡು ಹೋಯಿತು.

ಇರುವೆ ಪ್ರಾಣದಲ್ಲಿ ಪ್ರಾಣ ಇಟ್ಟುಕೊಂಡು ಎಲೆಗೇ ಕಚ್ಚಿ ಕುಳಿತಿದ್ದಿತು.

ಗಾಳಿ ಎಲೆಯನ್ನು ಹಳ್ಳಿಗೂ ಆಚೆ ಒಂದು ಹುಲ್ಲುಗಾವಲಿಗೆ ಒಯ್ದಿತು. ಅಲ್ಲಿ ಅದನ್ನು ಒಂದು ಬಂಡೆಯ ಮೇಲೆ ದೊಪ್ಪೆಂದು ಬೀಳಿಸಿತು. ಬಿದ್ದ ರಭಸಕ್ಕೆ ಇರವೆಯ ಕಾಲುಗಳಿಗೆ ಪೆಟ್ಟಾಯಿತು.

"ಇನ್ನು ನನ್ನ ಕತೆ ಮುಗಿಯಿತು. ಈಗ ನಾನು ಮನೆಗೆ ಎಂದೂ ಹಿಂದಿರುಗಲಾರೆ. ಎಲ್ಲವೂ ಸರಿಯಾಗಿ ಇದ್ದಿದ್ದರೆ ಬೇಗ ಮನೆಗೆ ಹೋಗಬಹುದಿತ್ತು. ಎಷ್ಟೇ ಆಗಲಿ ಇವೆಲ್ಲ ಸಮತಲ ಪ್ರದೇಶ. ಆದರೆ ಈ ಹಾಳು ನನ್ನ ಕಾಲುಗಳು ನೋಯುತ್ತಿವೆ. ನನಗೆ ನಡೆಯಲೇ ಆಗುತ್ತಿಲ್ಲ. ನಾನು ಸತ್ತೇ ಹೋಗುತ್ತೇನೋ ಏನೋ" ಹೀಗೆ ಯೋಚನೆ ಮಾಡುತ್ತ ಅದು ನೆಲದ ಮೇಲೆ ಬಿದ್ದುಕೊಂಡಿದ್ದಿತು.

ಸ್ವಲ್ಪ ಹೊತ್ತಾದ ಮೇಲೆ ಅದು ಒಮ್ಮೆ ಸುತ್ತ ನೋಡಿತು. ಅಲ್ಲೊಂದು ಕುಣಿಕೆಹುಳುವಿತ್ತು. ಇದೂ ಎಲ್ಲ ಹುಳುಗಳಂತೆಯೇ ಇದ್ದಿತು. ಆದರೆ ಇದಕ್ಕೆ ಹಿಂದುಗಡೆ ಹಾಗೂ ಮುಂದುಗಡೆ ಕಾಲುಗಳಿದ್ದವು.

"ಕುಣಿಕೆಹುಳು, ಕುಣಿಕೆಹುಳು. ನನ್ನನ್ನು ಸ್ವಲ್ಪ ಮನೆಗೆ ಕರೆದುಕೊಂಡು ಹೋಗುತ್ತೀಯ? ನನ್ನ ಕಾಲುಗಳು ನೋಯುತ್ತಿವೆ" ಇರುವೆ ಕೇಳಿತು.

"ಕಚ್ಚೋದಿಲ್ಲ ತಾನೆ?"

"ಇಲ್ಲ, ಇಲ್ಲ."

"ಸರಿ ಹಾಗಾದರೆ. ನನ್ನ ಮೇಲೆ ಹತ್ತಿ ಕುಳಿತುಕೋ."

ಇರುವೆ ಕುಣಿಕೆಹುಳುವಿನ ಬೆನ್ನು ಹತ್ತಿ ಕುಳಿತುಕೊಂಡಿತು. ಕುಣಿಕೆಹುಳುವು ತನ್ನ ಬೆನ್ನನ್ನು ಕುಣಿಕೆಯಂತೆ ಬಾಗಿಸಿ ತನ್ನ ಹಿಂಗಾಲುಗಳನ್ನು ಮುಂದಕ್ಕೆ ತಂದಿತು. ಅವುಗಳನ್ನು ಅದು ತನ್ನ ಮುಂಗಾಲುಗಳ ಹಿಂದೆ ತಂದಿರಿಸಿತು. ಹಾಗಾಗಿ ಅದರ ಬಾಲ ಅದರ ತಲೆಯ ಹಿಂದೆ ಬಂದಿತು. ಆಮೇಲೆ ಅದು ಹಠಾತ್ತನೆ ತನ್ನ ಮುಂಗಾಲುಗಳನ್ನು ಎತ್ತಿ ಗಾಳಿಯಲ್ಲಿ ಮೇಲಕ್ಕೆ ಕೊಂಡೊಯ್ದಿತು. ಈಗ ಅದು ತನ್ನ ಹಿಂಗಾಲುಗಳ ಮೇಲೆ ನೆಟ್ಟಗೆ ನಿಂತ ಸ್ಥಿತಿಯಲ್ಲಿದ್ದಿತು. ಅನಂತರ ಅದು ನೆಲದ ಮೇಲೆ ಮಲಗಿತು, ನೇರವಾಗಿ ನಿಶ್ಚಲವಾಗಿ ಕಡ್ಡಿಯಂತೆ. ಹೀಗೆ ಅದು ತನ್ನ ಉದ್ದವನ್ನು ನೆಲದ ಮೇಲೆ ಅಳೆದಿದ್ದಿತು. ಅನಂತರ ಅದು ಮತ್ತೆ ತನ್ನ ಬೆನ್ನನ್ನು ಕುಣಿಕೆಯಂತೆ ಬಾಗಿಸಿ ಹಿಂಗಾಲುಗಳನ್ನು ಮುಂದಕ್ಕೆ ತಂದಿತು. ಹೀಗೆ ಅದು ಇಡೀ ದೂರ ನೆಲವನ್ನು ತನ್ನ ಮೈ ಉದ್ದದಿಂದ ಅಳೆಯುತ್ತ ಮುಂದುವರಿಯುತ್ತಿದ್ದಿತು. ಈ ಮಧ್ಯೆ ಅದರ ಮೇಲೆ ಕುಳಿತಿದ್ದ ಇರುವೆ





ಮೇಲಕ್ಕೂ ಕೆಳಕ್ಕೂ ಮತ್ತೆ ಮತ್ತೆ ಹೋಗಿ ಬರುತ್ತಿದ್ದಿತು. ಒಮ್ಮೆ ಅದರ ತಲೆ ಮೇಲಿದ್ದರೆ ಒಮ್ಮೆ ಅದರ ಕಾಲು ಮೇಲಿರುತ್ತಿದ್ದಿತು.

"ಹೀಗೆ ತುಂಬ ದೂರ ಹೋಗುವುದು ನನ್ನಿಂದ ಸಾಧ್ಯವಿಲ್ಲ! ನಿಲ್ಲು, ಇಲ್ಲದಿದ್ದರೆ ನಿನ್ನನ್ನು ಕಚ್ಚಿ ಬಿಡುತ್ತೇನೆ!" ಎಂದಿತು ಅದು.

ಕುಣಿಕೆಹುಳು ನಿಂತಿತು. ತನ್ನ ಮೈಯನ್ನು ನೆಲದ ಉದ್ದಕ್ಕೂ ಚಾಚಿತು. ಇರುವೆ ಕೆಳಕ್ಕೆ ಜಿಗಿಯಿತು. ಹಾಗೆ ಮೇಲಕ್ಕೆ ಕೆಳಕ್ಕೆ ಹೋಗಿ ಬಂದುದರಿಂದಾಗಿ ಅದಕ್ಕೆ ಉಸಿರೇ ಕಟ್ಟಿಕೊಂಡಂತೆ ಆಗಿದ್ದಿತು.

ಸುತ್ತ ನೋಡಿತು. ಅಲ್ಲೊಂದು ಹುಲ್ಲುಗಾವಲಿತ್ತು. ಅದರಲ್ಲಿ ತಂದು ಹಾಕಿದ ಹುಲ್ಲು ರಾಶಿರಾಶಿಯಾಗಿ ಬಿದ್ದಿದ್ದಿತು. ಅದರ ಪಕ್ಕದಲ್ಲೇ ಉದ್ದ ಕಾಲುಗಳ ಜೇಡರಹುಳುವೊಂದು ಹೋಗುತ್ತಿದ್ದಿತು. ಅದರ ಕಾಲುಗಳು ಮೆಟ್ಟುಗೋಲುಗಳಂತಿದ್ದವು. ಅದರ ತಲೆಯು ಅವುಗಳ ನಡುವೆ ಮೇಲಕ್ಕೂ ಕೆಳಕ್ಕೂ ತೂಗಾಡುತ್ತಿದ್ದಿತು.

"ಜೇಡ, ಜೇಡ! ನನ್ನನ್ನು ಸ್ವಲ್ಪ ಮನೆಗೆ ಕರೆದುಕೊಂಡು ಹೋಗುತ್ತೀಯ? ನನ್ನ ಕಾಲುಗಳು ನೋಯುತ್ತಿವೆ."

"ಆಗಲಿ. ಹತ್ತಿ ಕೂತುಕೋ."

ಇರುವೆ ಜೇಡರಹುಳುವಿನ ಕಾಲಿನ ಮೇಲೆ ಮಂಡಿಯವರೆಗೂ ಮೇಲಕ್ಕೆ ಹತ್ತಿ ಅನಂತರ ಹುಳುವಿನ ಬೆನ್ನಿಗೆ ಹೋಗಲು ಕೆಳಕ್ಕೆ ಇಳಿಯಬೇಕಾಯಿತು. ಏಕೆಂದರೆ ಜೇಡರಹುಳುವಿನ ಮಂಡಿಗಳು ಅದರ ಬೆನ್ನಿಗಿಂತ ಹೆಚ್ಚು ಎತ್ತರದಲ್ಲಿರುತ್ತವೆ.

ಜೇಡರಹುಳುವು ತನ್ನ ಮೆಟ್ಟುಗೋಲುಗಳನ್ನು ಒಂದು ಇಲ್ಲಿ ಒಂದು ಅಲ್ಲಿ ಅನ್ನುವಂತೆ ಯದ್ವಾತದ್ವ ಹಾಕಿಕೊಂಡು ಮುಂದಕ್ಕೆ ಚಲಿಸ ತೊಡಗಿತು. ಅದರ ಎಂಟು ಕಾಲುಗಳೂ ಮೇಲಕ್ಕೆ ಕೆಳಕ್ಕೆ ಸರಿಯುತ್ತಿದ್ದವು. ಇದರಿಂದಾಗಿ ಇರುವೆಯ ತಲೆ ಸುತ್ತುವಂತಾಯಿತು. ಅಲ್ಲದೆ ಜೇಡ ತುಂಬ ನಿಧಾನವಾಗಿ ಹೋಗುತ್ತಿತ್ತು. ವಾಸ್ತವವಾಗಿ ಅದು ತನ್ನ ಶರೀರವನ್ನು ನೆಲದ ಮೇಲೆ ಎಳೆದುಕೊಂಡು ಮುಂದೆ ಪೋಗುತ್ತಿತ್ತು.

ಈ ರೀತಿಯ ಯಾನದಿಂದ ಇರುವೆಗೆ ಬೇಗನೆಯೇ ಆಯಾಸವಾಯಿತು. ಅದು ಬೇಸರಗೊಂಡು ಇನ್ನೇನು ಜೇಡನನ್ನು ಕಚ್ಚಬೇಕು ಅನ್ನುತ್ತಿರುವಾಗ, ಅವು ಒಂದು ನಯವಾದ ಸಮತಲವಾದ ಸ್ಥಳ ತಲುಪಿದ್ದವು.

ಜೇಡ ನಿಂತಿತು. "ಇನ್ನು ಇಳಿ. ಅಲ್ಲಿ ನೋಡು. ಜೀರುಂಡೆ ಕಾಣುತ್ತದೆಯೆ? ಅದು ನನಗಿಂತ ಹೆಚ್ಚು ಬೇಗ ಹೋಗುತ್ತೆ."

ಇರುವೆ ಜೇಡನ ಬೆನ್ನಿನಿಂದ ಕೆಳಕ್ಕೆ ಇಳಿಯಿತು.

"ಜೀರುಂಡೆ, ಜೀರುಂಡೆ! ನನ್ನನ್ನು ಸ್ವಲ್ಪ ಮನೆಗೆ ಕರೆದುಕೊಂಡು ಹೋಗುತ್ತೀಯ? ನನ್ನ ಕಾಲುಗಳು ನೋಯುತ್ತಿವೆ."

"ಆಗಲಿ. ಕೂತುಕೋ. ನೀನೂ ನನ್ನ ಜೊತೆ ಸವಾರಿ ಹೋದಂತಾಗುತ್ತೆ."

ಇರುವೆ ಇನ್ನೂ ಜೀರುಂಡೆಯ ಬೆನ್ನಿನ ಮೇಲೆ ಹತ್ತಿ ಕುಳಿತೇ ಇರಲಿಲ್ಲ, ಆಗಲೇ ಜೀರುಂಡೆ ವೇಗವಾಗಿ ಚಲಿಸ ತೊಡಗಿತು. ಜೀರುಂಡೆಯ ಕಾಲುಗಳು ಕುದುರೆಯ ಕಾಲುಗಳಂತೆ ನೇರವಾಗಿದ್ದವು. ಆರು ಕಾಲುಗಳ ಈ ಕುದುರೆ ಗಾಳಿಯಲ್ಲಿ ಹಾರಿಹೋಗುತ್ತಿದೆಯೋ ಅನ್ನುವಂತೆ ಸರಾಗವಾಗಿ ಸುಗಮವಾಗಿ ಓಡಿಕೊಂಡು ಹೋಯಿತು.

ಅವು ಬೇಗನೆಯೇ ಆಲೂಗಡ್ಡೆ ಹೊಲ ತಲುಪಿದವು.

"ಇನ್ನು ಇಳಿ. ನನಗೆ ಈ ಏರುಪೇರುಗಳಿರುವ ಭೂಮಿಯಲ್ಲಿ ಹೋಗುವುದು ಕಷ್ಟ. ಈ ಸಾಲುಗಳು ತುಂಬ ಕಡಿದಾಗಿವೆ. ನಾನು ಹತ್ತಲಾರೆ. ನೀನು ಇನ್ನು ಯಾವುದಾದರೂ ಬೇರೆ ಸವಾರಿ ಕಂಡುಕೋ."

ಇರುವೆಗೆ ಬೇರೆ ದಾರಿಯೇ ಇರಲಿಲ್ಲ. ಅದು ಇಳಿಯಲೇ ಬೇಕಾಯಿತು.

ಇರುವೆಗೆ ಆ ಆಲೂಗಡ್ಡೆ ಹೊಲ ಒಂದು ಕಾಡಿನಂತೆಯೇ ಇದ್ದಿತು. ಅದನ್ನು ದಾಟಲು ಅದಕ್ಕೆ ಇಡೀ



ಒಂದು ದಿನವೇ ಬೇಕಾಗುತ್ತಿತ್ತು, ಅದರ ಕಾಲುಗಳು ನೋಯುತ್ತಿರದೆ ಇದ್ದಾಗಲೂ. ಸೂರ್ಯ ಬೇಗನೆಯೇ ಮುಳುಗುತ್ತಿದ್ದ. ಆಗ ಇರುವೆಗೆ ಒಂದು ಕೀಚು ದನಿ ಕೇಳಿಸಿತು.

"ಬಾ, ಇರುವೆ ! ನನ್ನ ಮೇಲೆ ಹತ್ತಿ ಕೂತುಕೋ. ಹೋಗೋಣ !"

ಅದು ಯಾರು ಎಂದು ನೋಡಲು ಇರುವೆ ಅತ್ತ ತಿರುಗಿತು. ಅದೊಂದು ಪುಟ್ಟ ಚಿಗಟವಾಗಿತ್ತು. ಅದು ಇರುವೆಗಿಂತ ಗಾತ್ರದಲ್ಲಿ ಚಿಕ್ಕದಾಗಿತ್ತು.

"ನನ್ನನ್ನು ಹೊರಲು ನಿನಗೆಲ್ಲಿ ಆಗುತ್ತೆ? ನೀನು ಎಷ್ಟು ಚಿಕ್ಕವ."

"ನೀನು ಮಹಾ ದೊಡ್ಡೋನು ಅಂದುಕೊಂಡು ಬಿಟ್ಟೆಯಾ? ಬಾ, ಬಾ ! ಹೋಗೋಣ, ಬಾ !"

ಇರುವೆ ಹೇಗೋ ಅಂತೂ ಚಿಗಟದ ಬೆನ್ನೇರಿ ಕುಳಿತುಕೊಂಡಿತು. ಆದರೂ ಅದರ ಕಾಲುಗಳು ಚಿಗಟದ ಆ ಕಡೆ ಈ ಕಡೆ ತೂಗಿ ಬಿದ್ದೇ ಇದ್ದವು.

"ಕೂತುಕೊಂಡೆಯಾ?"

"ಹಾಗಂದುಕೊಂಡಿದೀನಿ."

"ಸರಿ. ಭದ್ರವಾಗಿ ಹಿಡಿದುಕೋ."

ಚಿಗಟವು ತನ್ನ ಬಲವಾದ ಹಿಂಗಾಲುಗಳನ್ನು ತನ್ನ ಶರೀರದ ಕೆಳಗೆ ಮಡಿಸಿಕೊಂಡಿತು. ಮಡಿಸಿದಾಗ ಆ ಕಾಲುಗಳು ಪುಟ್ಟ ಎಗರುಪಟ್ಟಿ (ಸ್ಪ್ರಿಂಗ್)ಗಳಂತಿದ್ದವು. ಕ್ಲಿಕ್... ಎಗರುಪಟ್ಟಿ ಬಿಚ್ಚಿಕೊಂಡಿತು. ಚಿಗಟ ಹೊಲದ ಉತ್ತಿದ ಒಂದು ಸಾಲಿನ ಮೇಲೆ ಹೋಗಿ ಕುಳಿತುಕೊಂಡಿತು. ಕ್ಲಿಕ್ ! ಅವು ಇನ್ನೊಂದು ಸಾಲಿನ ಮೇಲಿದ್ದವು. ಕ್ಲಿಕ್ ! ಅವು ಮೂರನೆಯ ಸಾಲಿನ ಮೇಲಿದ್ದವು. ಹೀಗೆ ಅವು ಒಂದು ಸಾಲಿನ ಮೇಲಿನಿಂದ ಮತ್ತೊಂದಕ್ಕೆ ಕುಪ್ಪಳಿಸಿಕೊಂಡು ಹೋಗುತ್ತ ಕೊನೆಗೆ ಬೇಲಿಯ ಬಳಿಗೆ ಬಂದವು.

"ನಿನ್ನ ಕೈಲಿ ಈ ಬೇಲಿಯನ್ನೂ ಹಾರೋಕೆ ಆಗುತ್ತೆಯೆ?" ಇರುವೆ ಕೇಳಿತು.

"ಇಲ್ಲ. ಇದು ತುಂಬ ಎತ್ತರ. ಆ ಮಿಡತೆಯನ್ನು ಕೇಳು. ಅದು ಹಾರಬಲ್ಲುದು."





"ಮಿಡತೆ, ಮಿಡತೆ! ನನ್ನನ್ನು ಸ್ವಲ್ಪ ಮನೆಗೆ ಕರೆದುಕೊಂಡು ಹೋಗುತ್ತೀಯ? ನನ್ನ ಕಾಲುಗಳು ನೋಯುತ್ತಿವೆ."

"ಆಗಲಿ. ಅದಕ್ಕೇನಂತೆ."

ಇರುವೆ ಮಿಡತೆಯ ಬೆನ್ನು ಹತ್ತಿ ಕುಳಿತುಕೊಂಡಿತು.

ಮಿಡತೆಯು ತನ್ನ ಉದ್ದವಾದ ಹಿಂಗಾಲುಗಳನ್ನು ಅರ್ಧ ಮಡಿಸಿ ಆಮೇಲೆ ತಕ್ಷಣವೇ ಅವನ್ನು ಸೆಟೆದು ನಿಲ್ಲಿಸಿತು. ಇದರ ಫಲವಾಗಿ ಮಿಡತೆ ಗಾಳಿಯಲ್ಲಿ ಎತ್ತರಕ್ಕೆ ಹಾರಿತು, ಚಿಗಟ ಹಾರಿದಂತೆಯೇ. ಆದರೆ ಮಿಡತೆ ತಕ್ಷಣವೇ ತನ್ನ ರೆಕ್ಕೆಗಳನ್ನು ಭಾರಿ ಚಟಚಟ ಸದ್ದಿನೊಂದಿಗೆ ಬಿಚ್ಚಿಕೊಂಡು ಬೇಲಿಗೂ ಮೇಲೆ ಹಾರಿತು. ಅವು ಬೇಲಿಯ ಅತ್ತ ಬದಿಯಲ್ಲಿ ನೆಲದ ಮೇಲೆ ನಿಧಾನವಾಗಿ ಬಂದಿಳಿದವು.

"ಇಷ್ಟೇ ನನ್ನ ಕೈಲಿ ಆಗೋದು. ಇನ್ನು ನೀನು ಇಳಿಯಬೇಕು."

ಇರುವೆ ಇಳಿದು ಮುಂದೆ ನೋಡಿತು. ನದಿ ಹರಿಯುತ್ತಿತ್ತು. ಅದನ್ನು ಈಜಿಕೊಂಡು ದಾಟುವುದು ಅದಕ್ಕೆ ಎಂದೂ ಆಗದ ಕೆಲಸವಾಗಿತ್ತು.

ಸೂರ್ಯ ಆಗಲೇ ಇನ್ನೂ ಕೆಳಕ್ಕೆ ಇಳಿದಿದ್ದ.

"ಈ ನದಿಯನ್ನು ಹಾರಿಕೊಂಡು ದಾಟುವುದು ನನ್ನ ಕೈಲಾಗದು" ಎಂದಿತು ಮಿಡತೆ. "ನದಿ ತುಂಬ ಅಗಲ. ಆದರೆ ತಾಳು. ನಾನು ನೀರುಹುಳುವನ್ನು ಕರೆಯುತ್ತೇನೆ. ಅದು ನಿನ್ನನ್ನು ನದಿ ದಾಟಿಸುವುದು." ಅದು

ಒಂದು ರೀತಿಯ 'ಸುಂಯ್' ಅನ್ನುವ ಶಬ್ದ ಮಾಡಿತು. ಕೂಡಲೇ ನೀರಿನ ಮೇಲೆ ಒಂದು ಪುಟ್ಟ ದೋಣಿ ತೇಲಿಕೊಂಡು ಬಂದಿತು. ಅದಕ್ಕೆ ಕಾಲುಗಳಿದ್ದವು. ಹೆಚ್ಚು ಹತ್ತಿರ ಬಂದಾಗ ಇರುವೆ ಅದನ್ನು ಸೂಕ್ಷ್ಮ ವಾಗಿ ನೋಡಿತು. ಅದೇನೂ ದೋಣಿಯಾಗಿರಲಿಲ್ಲ. ಅದು ನೀರುಹುಳುವಾಗಿತ್ತು.

"ನೀರುಹುಳು, ನೀರುಹುಳು ! ನನ್ನನ್ನು ಸ್ವಲ್ಪ ಮನೆಗೆ ಕರೆದುಕೊಂಡು ಹೋಗುತ್ತೀಯ ? ನನ್ನ ಕಾಲು ಗಳು ನೋಯುತ್ತಿವೆ."

"ಆಗಲಿ. ಹತ್ತಿ ಕೂತುಕೋ."

ಇರುವೆ ನೀರುಹುಳುವಿನ ಬೆನ್ನ ಮೇಲೆ ಹತ್ತಿ ಕುಳಿತಿತೋ ಇಲ್ಲವೋ ನೀರುಹುಳು ನೀರಿನ ಮೇಲೆ ಚಲಿಸ ತೊಡಗಿತು – ಅದು ನೆಲದ ಮೇಲೆ ನಡೆಯುತ್ತಿದೆಯೋ ಅನ್ನುವಂತೆ.

ಈ ಹೊತ್ತಿಗೆ ಸೂರ್ಯ ಬಹುಮಟ್ಟಿಗೆ ಮುಳುಗಿದ್ದ.

"ಇನ್ನೂ ಸ್ವಲ್ಪ ಹೆಚ್ಚು ವೇಗವಾಗಿ ಹೋಗಲಾರೆಯಾ ? ದಯವಿಟ್ಟು ಪ್ರಯತ್ನಿಸು. ತಡವಾದರೆ ನನ್ನನ್ನು ಮನೆಯ ಒಳಕ್ಕೆ ಬಿಡೊಲ್ಲ."

"ಆಗಲಿ. ಪ್ರಯತ್ನಿಸುತ್ತೇನೆ" ಎಂದಿತು ನೀರುಹುಳು. ಅದು ಸಾಧ್ಯವಾದಷ್ಟೂ ವೇಗವಾಗಿ ಹೋಗಲು ಯತ್ನಿಸಿತು. ಹಿಂದಿನ ಕಾಲುಗಳಿಂದ ಗಟ್ಟಿಯಾಗಿ ಚಿಮ್ಮಿ ಅನಂತರ ಮಂಜಿನ ಮೇಲೆ ಜಾರಿಕೊಂಡು ಹೋಗು ತ್ತಿದೆಯೋ ಅನ್ನುವಂತೆ ಮುಂದಕ್ಕೆ ಸರಿಯುತ್ತಿತ್ತು. ಅವು ಬೇಗನೆಯೇ ಎದುರು ದಡ ತಲುಪಿದವು.

"ನಿನಗೆ ನೆಲದ ಮೇಲೆ ನಡೆಯುವುದಕ್ಕೆ ಆಗುವುದಿಲ್ಲವೇ ?" ಇರುವೆ ನೀರುಹುಳುವನ್ನು ಕೇಳಿತು.

"ಊಹೂಂ. ನೆಲ ತುಂಬ ಗಟ್ಟಿ. ನನ್ನ ಪಾದಗಳು ಅಲ್ಲಿ ಜಾರಿಕೊಂಡು ಹೋಗಲಾರವು. ಅಲ್ಲದೆ ಮುಂದೆ ಕಾಡಿದೆ. ನೀನು ಬೇರೆ ಯಾವುದಾದರೂ ಸವಾರಿ ಕಂಡುಕೊಳ್ಳುವುದು ಒಳ್ಳೆಯದು."

ಇರುವೆ ತಲೆ ಎತ್ತಿ ನೋಡಿತು. ಕಾಡಿನಲ್ಲಿ ಮರಗಳು ಮುಗಿಲು ಮುಟ್ಟುವಂತೆ ಎತ್ತರವಾಗಿ ಎದ್ದು ನಿಂತಿದ್ದವು. ಸೂರ್ಯ ಆಗಲೇ ಈ ಮರಗಳ ಹಿಂದೆ ಮುಳುಗಿದ್ದ. ಅಯ್ಯೋ, ಏನು ಮಾಡುವುದು ? ಸಕಾಲ ದಲ್ಲಿ ಮನೆ ತಲುಪಲು ಆಗುವುದೇ ಇಲ್ಲ ಅಂತ ಕಾಣುತ್ತೆ.

"ಪರವಾಗಿಲ್ಲ, ನಿನ್ನ ಅದೃಷ್ಟ ಚೆನ್ನಾಗಿದೆ. ನೋಡು, ಸವಾರಿಯೊಂದು ಈ ಕಡೆಯೇ ಬರುತ್ತಿದೆ" ನೀರು ಹುಳು ಹೇಳಿತು.





ನಿಜಕ್ಕೂ, ಒಂದು ದೊಡ್ಡ ಒಡ್ಡೊಡ್ಡಾದ ಮೇಬಗ್ ಕೀಟ ಅತ್ತ ಕಡೆಗೆ ಬರುತ್ತಿತ್ತು. ಉಹೂಂ, ಇಂಥ ಸವಾರಿಯಿಂದ ಪ್ರಯೋಜನವಿಲ್ಲ! ಆದರೂ ಇರುವೆ ನೀರುಹುಳುವಿನ ಸಲಹೆಯನ್ನು ಮನ್ನಿಸಿ ಆ ಕೀಟ ವನ್ನು ಕೇಳಿತು:

"ಮೇಬಗ್, ಮೇಬಗ್! ನನ್ನನ್ನು ಸ್ವಲ್ಪ ಮನೆಗೆ ಕರೆದುಕೊಂಡು ಹೋಗುತ್ತೀಯ? ನನ್ನ ಕಾಲುಗಳು ನೋಯುತ್ತಿವೆ."

"ಎಲ್ಲಿ ನಿನ್ನ ಮನೆ?"

"ಈ ಕಾಡಿನಾಚೆ, ಇರುವೆ ಗೂಡಿನಲ್ಲಿ."

"ಓಹೋ, ಅದು ತುಂಬ ದೂರವೇ. ಆದರೂ ಪರವಾಗಿಲ್ಲ. ಕುಳಿತುಕೋ."

ಇರುವೆ ಮೇಬಗ್‌ನ ಗಡುಸಾದ ಪಕ್ಕವನ್ನು ಹತ್ತಿ ಕುಳಿತಿತು.

"ಕೂತುಕೊಂಡೆಯಾ?"

"ಹುಂ."

"ಎಲ್ಲಿ ಕೂತುಕೊಂಡೆ?"

"ನಿನ್ನ ಬೆನ್ನಿನ ಮೇಲೆ."

"ಅಯ್ಯೋ ಪೆದ್ದ! ನನ್ನ ತಲೆಯ ಮೇಲೆ ಕೂತುಕೋ."

ಇರುವೆ ಮೇಬಗ್‌ನ ತಲೆಯ ಮೇಲಕ್ಕೆ ಸರಿದು ಹೋಯಿತು. ಹಾಗೆ ಮಾಡಿದ್ದೇ ಒಳ್ಳೆಯದಾಯಿತು. ಯಾಕೆಂದರೆ ಮುಂದಿನ ಘಳಿಗೆಯಲ್ಲೇ ಮೇಬಗ್‌ನ ಬೆನ್ನು ಇಬ್ಭಾಗವಾಗಿ ಎರಡು ಗಡುಸಾದ ರೆಕ್ಕೆಗಳು ಕಾಣಿಸಿಕೊಂಡವು. ಅವು ತಲೆ ಕೆಳಕಾದ ಸೌಟಿನಂತಿದ್ದವು.

ಮೇಬಗ್ ತನ್ನ ಗಡುಸಾದ ರೆಕ್ಕೆಗಳನ್ನು ಬಿಚ್ಚಿದ ಕೂಡಲೇ ಅವುಗಳ ಕೆಳಗಿನಿಂದ ಒಂದು ಜೊತೆ ರೇಷ್ಮೆ ಯಂತೆ ನವುರಾದ ಪಾರದರ್ಶಕವಾದ ರೆಕ್ಕೆಗಳು ತೆರೆದುಕೊಂಡವು. ರೇಷ್ಮೆಯ ರೆಕ್ಕೆಗಳು ಗಡುಸಾದ ಮೇಲು ರೆಕ್ಕೆಗಳಿಗಿಂತ ಹೆಚ್ಚು ಉದ್ದವೂ ಹೆಚ್ಚು ಅಗಲವೂ ಆಗಿದ್ದವು.

"ಉಫ್, ಉಫ್, ಉಫ್!" ಎಂದು ಮೇಬಗ್ ಮೋಟಾರ್ ಯಂತ್ರವನ್ನು ಚಾಲನೆಗೆ ತರುತ್ತಿದೆಯೋ ಅನ್ನುವಂತೆ ಒತ್ತುಸಿರು ಬಿಡುತ್ತ ಮುಂದಕ್ಕೆ ಚಲಿಸ ತೊಡಗಿತು.

"ಇನ್ನೂ ಸ್ವಲ್ಪ ಬೇಗ ಹೋಗಲಾರೆಯಾ? ದಯವಿಟ್ಟು ಪ್ರಯತ್ನಿಸು!" ಎಂದು ಇರುವೆ ಹೇಳಿತು.

ಮೇಬಗ್ ಉತ್ತರಿಸಲಿಲ್ಲ. ಸುಮ್ಮನೆ ಒತ್ತುಸಿರು ಬಿಡುತ್ತಲೇ ಹೋಯಿತು. ಆಮೇಲೆ ಅದರ ಪಾರ ದರ್ಶಕವಾದ ಪುಟ್ಟ ಕೆಳರೆಕ್ಕೆಗಳು ಚಲಿಸ ತೊಡಗಿದವು. ಅವು ಹೆಚ್ಚು ಹೆಚ್ಚು ವೇಗವಾಗಿ ಅದುರ ತೊಡಗಿದವು. ಝೆರ್ಝೆರ್ಝೆ! ತೂಕ್-ತೂಕ್-ತೂಕ್! ಮೇಬಗ್ ನೇರವಾಗಿ ಗಾಳಿಯಲ್ಲಿ ಮೇಲಕ್ಕೆ ಹಾರಿತು, ಶೀಶೆ ಯಿಂದ ಬಿರುಡೆ ಮೇಲಕ್ಕೆ ಹಾರುವಂತೆ. ಅದು ಮರಗಳ ತುದಿಗಳಿಗೂ ಆಚೆ ಹಾರಿಹೋಯಿತು.

ಈ ಭಾರಿ ಎತ್ತರದಿಂದ ಇರುವೆಗೆ ಸೂರ್ಯನ ಬಿಂಬ ಆಗಲೇ ನೆಲ ಮುಟ್ಟುತ್ತಿದ್ದುದು ಕಂಡುಬಂದಿತು. ಮೇಬಗ್ ಎಷ್ಟು ವೇಗವಾಗಿ ಹೋಗುತ್ತಿದ್ದಿತೆಂದರೆ ಇರುವೆಗೆ ಉಸಿರು ಕಟ್ಟಿದಂತಾಯಿತು. ಝೆರ್ಝೆರ್ಝೆ... ತೂಕ್-ತೂಕ್-ತೂಕ್! ಮೇಬಗ್ ಗಾಳಿಯಲ್ಲಿ ಗುಂಡಿನಂತೆ ಹಾರಿಕೊಂಡು ಹೋಗುತ್ತಿತ್ತು.

ಕೆಳಗೆ ಕಾಡು ಒಂದು ಘಳಿಗೆಯಷ್ಟೇ ಕಂಡುದು. ಆಮೇಲೆ ಮಾಯವಾಯಿತು. ಈಗ ಇರುವೆಗೆ ಅದರ ಸುಪರಿಚಿತ ಬರ್ಚ್ ಮರ ಕಂಡಿತು. ಮರದ ಬುಡದಲ್ಲಿದ್ದ ಅದರ ಇರುವೆ ಗೂಡೂ ಕಂಡಿತು. ಅವು ಬರ್ಚ್ ಮರದ ಮೇಲೆ ಸರಿಯಾಗಿ ಬಂದಾಗ ಮೇಬಗ್ ತನ್ನ ಮೋಟಾರ್‌ಯಂತ್ರವನ್ನು ನಿಲ್ಲಿಸಿತು. ಮರದ ಒಂದು ಕೊಂಬೆಯ ಮೇಲೆ ಬಂದು ಕುಳಿತಿತು.

"ಅಯ್ಯೋ, ಇಲ್ಲೇ ಕುಳಿತು ಬಿಟ್ಟೆಯಲ್ಲ. ಈಗ ನಾನು ಕೆಳಗೆ ಹೇಗೆ ಇಳಿದು ಹೋಗೋದು? ನನ್ನ ಕಾಲುಗಳು ಇನ್ನೂ ನೋಯುತ್ತಿವೆ. ನಾನು ಬಿದ್ದು ಕತ್ತು ಮುರಿದುಕೊಳ್ಳುತ್ತೇನೆ, ಅಷ್ಟೆ" ಎಂದಿತು ಇರುವೆ.

ಮೇಬಗ್ ತನ್ನ ರೇಷ್ಮೆ ರೆಕ್ಕೆಗಳನ್ನು ಮುಚ್ಚಿಕೊಂಡಿತು. ಆಮೇಲೆ ಅವುಗಳ ಮೇಲೆ ಗಡುಸಾದ ಮೇಲು ರೆಕ್ಕೆಗಳನ್ನು ಹೊದಿಸಿತು. ಅದು ರೇಷ್ಮೆ ರೆಕ್ಕೆಗಳ ಅಂಚುಗಳನ್ನು ಜಾಗರೂಕತೆಯಿಂದ ಗಡುಸಾದ ಸೌಟಿನಂತಿದ್ದ ಮೇಲು ರೆಕ್ಕೆಗಳ ಒಳಗೆ ಸೇರಿಸಿತು. ಅದು ಒಂದು ಘಳಿಗೆ ಸುಮ್ಮನಿದ್ದು ಆಮೇಲೆ ಹೇಳಿತು: "ನನಗೇನು ಗೊತ್ತು ನೀನು ಹೇಗೆ ಕೆಳಗೆ ಇಳಿದು ಹೋಗಬೇಕು ಅಂತ? ನಾನಂತೂ ನಿನ್ನನ್ನು ಕರಕೊಂಡು ಹೋಗಲ್ಲ. ಅಷ್ಟೆ ನನಗೆ ಗೊತ್ತಿರೋದು. ನೀವು ಇರುವೆಗಳು ತುಂಬ ಗಟ್ಟಿಯಾಗಿ ಕಚ್ಚುತ್ತೀರ. ನೀನೇ ಹೇಗೆ ಬೇಕೋ ಹಾಗೆ ಇಳಿದುಕೊಂಡು ಹೋಗು."

ಇರುವೆ ಮರದ ಕೆಳಗೆ ತನ್ನ ಮನೆಯತ್ತ ನೋಡಿತು, ಆಮೇಲೆ ಸೂರ್ಯನತ್ತ ನೋಡಿತು. ಭೂಮಿ ಆಗಲೇ ಸೂರ್ಯನನ್ನು ಅರ್ಧ ನುಂಗಿ ಹಾಕಿದ್ದಿತು.

ಇರುವೆ ಸುತ್ತ ನೋಡಿತು. ಎತ್ತ ನೋಡಿದರೂ ಎಲೆಗಳೂ ಕೊಂಬೆಗಳೇ, ಎಲೆಗಳೂ ಕೊಂಬೆಗಳೇ!

ಹೊತ್ತಿಗೆ ಸರಿಯಾಗಿ ಮನೆ ತಲುಪುವುದು ಸಾಧ್ಯವಿಲ್ಲ. ಹೋಗಲಿ ಧುಮುಕೋಣವೆ ಅಂದರೆ ಅದೂ ಆಗದ ಮಾತು!

ಆಗ ಅದಕ್ಕೆ ಇದ್ದಕ್ಕಿದ್ದಂತೆ ಹತ್ತಿರದ ಎಲೆಯೊಂದರ ಮೇಲೆ ಒಂದು ಕಂಬಳಿಹುಳು ಕಾಣಬಂದಿತು. ಅದು ರೇಷ್ಮೆಯಂಥ ನವುರಾದ ದಾರ ನೂಲುತ್ತ ಅದನ್ನು ಒಂದು ಪುಟ್ಟ ಟೊಂಗೆಯ ಸುತ್ತ ಸುತ್ತುತ್ತಿತ್ತು.

"ಕಂಬಳಿಹುಳು, ಕಂಬಳಿಹುಳು! ನನಗೆ ಸ್ವಲ್ಪ ಕೆಳಕ್ಕೆ ಇಳಿಯೋದಕ್ಕೆ ಸಹಾಯ ಮಾಡ್ತೀಯ? ಇನ್ನು ಒಂದೇ ಒಂದು ನಿಮಿಷ ಉಳಿದಿದೆ. ತಡವಾದರೆ ಇಡೀ ರಾತ್ರಿ ಹೊರಗೆ ಕಳೆಯಬೇಕಾಗುತ್ತೆ."

"ಸುಮ್ಮನೆ ಹೋಗು, ನನಗೆ ತೊಂದರೆ ಕೊಡಬೇಡ! ಕಾಣೋದಿಲ್ವೇ ನಾನು ಕೆಲಸ ಮಾಡ್ತಿದೀನಿ!"

"ಏನು ಹಾಗಂತೀಯ. ನಾನು ಕೇಳಿದೋರೆಲ್ಲ ನನಗೆ ಸಹಾಯ ಮಾಡಿದರು. ಯಾರೂ ದೂರ ಅಟ್ಟ

ಲಿಲ್ಲ. ನೀನೊಬ್ಬನೇ ನನಗೆ ಸಹಾಯ ಮಾಡಲು ಇಚ್ಛಿಸುತ್ತಿಲ್ಲ." ಹಾಗೆಂದು ಇರುವೆ ಕಂಬಳಿಹುಳುವಿನ ಮೇಲೆ ಬಿದ್ದು ಅದನ್ನು ಕಚ್ಚಿತು.

ಕಂಬಳಿಹುಳು ಇದನ್ನು ನಿರೀಕ್ಷಿಸಿರಲಿಲ್ಲ. ಅದು ತಕ್ಷಣವೇ ತನ್ನ ದೇಹವನ್ನು ಸುರುಳಿ ಸುತ್ತಿಕೊಂಡು ಎಲೆಯ ಮೇಲಿನಿಂದ ಕೆಳಕ್ಕೆ ಉರುಳಿತು. ಇರುವೆಯೂ ಅದನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದಿತು.

ಅವು ಹೆಚ್ಚು ದೂರವೇನೂ ಕೆಳಕ್ಕೆ ಬೀಳಲಿಲ್ಲ. ಏಕೆಂದರೆ ಏನೋ ಅವನ್ನು ಹಿಡಿದೆಳೆಯುತ್ತಿದ್ದಿತು, ತಡೆ ಹಿಡಿದಿದ್ದಿತು. ಅವು ರೇಷ್ಮೆಯಂಥ ದಾರದ ತುದಿಯಲ್ಲಿ ಹಿಂದಕ್ಕೂ ಮುಂದಕ್ಕೂ ತೂಗಾಡುತ್ತಿದ್ದವು. ಈ ದಾರ ಅವುಗಳ ಮೇಲೆ ಎತ್ತರದಲ್ಲಿ ಟೊಂಗೆಯೊಂದಕ್ಕೆ ಸಿಕ್ಕಿಕೊಂಡಿದ್ದಿತು. ಇರುವೆಯೂ ಕಂಬಳಿಹುಳುವೂ ಉಯ್ಯಾಲೆಯ ಮೇಲಿದ್ದವೋ ಅನ್ನುವಂತೆ ಹಿಂದಕ್ಕೂ ಮುಂದಕ್ಕೂ ತೂಗಾಡುತ್ತಿದ್ದವು. ಇಡೀ ಕಾಲ ದಾರವೂ ಹೆಚ್ಚು ಹೆಚ್ಚು ಉದ್ದವಾಗುತ್ತಿತ್ತು. ಅದು ಕಂಬಳಿಹುಳುವಿನ ಒಡಲಿನಿಂದ ನೂತು ಬರುತ್ತಿತ್ತು, ಉದ್ದವಾಗುತ್ತಿತ್ತು, ಆದರೆ ತುಂಡಾಗುತ್ತಿರಲಿಲ್ಲ.

ಹೀಗೆ ಇರುವೆಯೂ ಕಂಬಳಿಹುಳುವೂ ನೆಲಕ್ಕೆ ಹೆಚ್ಚು ಹೆಚ್ಚು ಹತ್ತಿರ ಬರುತ್ತಿದ್ದವು.

ಈ ಮಧ್ಯೆ ಇರುವೆ ಗೂಡಿನಲ್ಲಿ ಎಲ್ಲ ಇರುವೆಗಳೂ ತಮ್ಮ ಸುರಂಗಗಳನ್ನು ಮುಚ್ಚುವುದರಲ್ಲಿ ತೊಡಗಿದ್ದವು. ಎಲ್ಲವನ್ನೂ ಮುಚ್ಚಿದ್ದಾಯಿತು. ಇನ್ನು ಒಂದೇ ಒಂದು ತೆರೆದಿದೆ.

ಇರುವೆ ಕೂಡಲೇ ಕಂಬಳಿಹುಳುವಿನ ಮೇಲಿನಿಂದ ಜಿಗಿದು ಗೂಡಿನ ಒಳಗೆ ಸೇರಿಕೊಂಡಿತು !

ಆ ಹೊತ್ತಿಗೆ ಸರಿಯಾಗಿ ಸೂರ್ಯನೂ ಮುಳುಗಿದ.





# ಮೊದಲ ಬೇಟೆ

ನಾಯಿಮರಿಗೆ ಅಂಗಳದಲ್ಲೇ ಕೋಳಿಮರಿಗಳನ್ನು ಓಡಾಡಿಸಿಕೊಂಡು ಹೋಗಿ ಹೋಗಿ ಬೇಸರ ವಾಗಿತ್ತು, ಬಳಲಿಕೆಯಾಗಿತ್ತು.

"ಹೋಗಿ ಹಕ್ಕಿಗಳನ್ನಾದರೂ ಹಿಡೀತೀನಿ, ಕಾಡುಮೃಗಗಳನ್ನಾದರೂ ಹಿಡೀತೀನಿ" ಎಂದದು ನಿರ್ಧರಿಸಿತು.

ಹಾಗೆಂದುಕೊಂಡು ಅದು ಗೇಟಿನ ಕೆಳಗೆ ನುಸುಳಿ ಹೊರ ಹೋಗಿ ಹುಲ್ಲುಗಾವಲಿನ ಕಡೆಗೆ ಓಡಿತು.

ಅದು ಓಡಿ ಹೋಗುತ್ತಿದ್ದಂತೆ ಕಾಡುಮೃಗಗಳೂ ಹಕ್ಕಿಗಳೂ ಹಾಗೂ ಕೀಟಗಳೂ ಅದನ್ನು ಕಂಡವು. ಅವುಗಳಲ್ಲಿ ಒಂದೊಂದೂ ತನ್ನಲ್ಲೇ ಹೇಳಿಕೊಂಡಿತು:

"ಓಹೋ, ಈ ನಾಯಿಮರಿ ಬೇಟೆಗೆ ಹೊರಟಿದೆಯೋ? ಆಗಲಿ, ನಾನದಕ್ಕೆ ಸರಿಯಾಗಿ ಮೋಸ ಮಾಡುತ್ತೇನೆ" ಎಂದುಕೊಂಡಿತು ಬಿಟರ್ನ್ ಹಕ್ಕಿ.

"ನಾನದನ್ನು ಆಶ್ಚರ್ಯಗೊಳ್ಳುವಂತೆ ಮಾಡುತ್ತೇನೆ!" ಅಂದುಕೊಂಡಿತು ಹೂಪಯೆ ಹಕ್ಕಿ.

"ನಾನದನ್ನು ಬೆದರಿಸುತ್ತೇನೆ" ಅಂದುಕೊಂಡಿತು ರೈನಿಕ್ ಹಕ್ಕಿ.

"ನಾನು ಅದರಿಂದ ತಪ್ಪಿಸಿಕೊಂಡು ಹೋಗುತ್ತೇನೆ" ಅಂದುಕೊಂಡಿತು ಹಲ್ಲಿ.

ಕಂಬಳಿ ಹುಳುಗಳು, ಚಿಟ್ಟೆಗಳು, ಮಿಡತೆಗಳು, ಎಲ್ಲವೂ ಅಂದುಕೊಂಡವು: "ನಾವು ಅದರ ಕಣ್ಣಿಗೆ ಬೀಳದಂತೆ ಇದ್ದು ಬಿಡುತ್ತೇವೆ."

"ನಾನಂತೂ ಅದನ್ನು ಹೊಡೆದು ಅಟ್ಟುತ್ತೇನೆ" ಅಂದುಕೊಂಡಿತು ಜೀರುಂಡೆ.

"ಪರವಾಗಿಲ್ಲ. ನಾವೆಲ್ಲ ನಮ್ಮನ್ನು ರಕ್ಷಿಸಿಕೊಳ್ಳಬಲ್ಲೆವು – ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ!" ಎಂದು ಅವೆಲ್ಲ ಅಂದುಕೊಂಡವು.

ಈ ಮಧ್ಯೆ ನಾಯಿಮರಿಯು ಕೊಳದ ಬಳಿಗೆ ಓಡಿಹೋಗಿತ್ತು. ಅಲ್ಲಿ ಅದು ಬಿಟರ್ನ್ ಹಕ್ಕಿಯನ್ನು ಕಂಡಿತು. ಆ ಹಕ್ಕಿಯು ಜೊಂಡುಗಳ ಪಕ್ಕದಲ್ಲಿ ಒಂದೇ ಕಾಲಿನ ಮೇಲೆ ನಿಂತಿದ್ದಿತು. ನೀರು ಅದರ ಮಂಡಿಯವರೆಗೆ ಬಂದಿದ್ದಿತು.



"ಓ-ಹೋ !" ಎಂದು ಸಂತೋಷದಿಂದ ಉದ್ಗರಿಸಿತು ನಾಯಿಮರಿ. "ನಾನಿದನ್ನು ಈಗಲೇ ಹಿಡಿದು ಹಾಕುತ್ತೇನೆ." ಅದು ಹಕ್ಕಿಯ ಮೇಲೆ ಹಾರಿಹೋಗಿ ಬೀಳಲು ಸಿದ್ಧವಾಯಿತು. ಆದರೆ ಬಿಟರ್ನ್ ಹಕ್ಕಿ ಅದನ್ನು ಓರೆಗಣ್ಣಿನಿಂದಲೇ ಕಂಡುಬಿಟ್ಟು ಜೊಂಡುಗಳ ಮಧ್ಯಕ್ಕೆ ಸರಿದು ಹೋಯಿತು.

ಗಾಳಿ ಜೋರಾಗಿ ಬೀಸುತ್ತಿತ್ತು. ಜೊಂಡುಗಳು ಗಾಳಿಯಲ್ಲಿ ಓಲಾಡುತ್ತಿದ್ದವು –

ಹಿಂದಕ್ಕೂ ಮುಂದಕ್ಕೂ,
ಹಿಂದಕ್ಕೂ ಮುಂದಕ್ಕೂ...

ನಾಯಿಮರಿಯ ಕಣ್ಣುಗಳ ಮುಂದೆ ಕಂದು ಹಾಗೂ ಹಳದಿ ಪಟ್ಟೆಗಳು ಓಲಾಡುತ್ತಿದ್ದವು –

ಹಿಂದಕ್ಕೂ ಮುಂದಕ್ಕೂ,
ಹಿಂದಕ್ಕೂ ಮುಂದಕ್ಕೂ...

ಬಿಟರ್ನ್ ಹಕ್ಕಿಯು ಜೊಂಡುಗಳ ಮಧ್ಯೆ ನಿಂತಿದ್ದಿತು. ಅದರ ಮೈ ಮೇಲೆಲ್ಲ ಹಳದಿ ಹಾಗೂ ಕಂದು ಪಟ್ಟೆಗಳು. ಅದು ಅಲ್ಲಿ ನಿಂತು ಓಲಾಡುತ್ತಿದ್ದಿತು –

ಹಿಂದಕ್ಕೂ ಮುಂದಕ್ಕೂ,
ಹಿಂದಕ್ಕೂ ಮುಂದಕ್ಕೂ...

ನಾಯಿಮರಿ ಕಣ್ಣುಗಳನ್ನು ಅಗಲವಾಗಿ ಬಿಟ್ಟುಕೊಂಡು ನೋಡೇ ನೋಡಿತು. ಆದರೆ ಜೊಂಡುಗಳ ಮಧ್ಯೆ ಬಿಟರ್ನ್ ಹಕ್ಕಿ ಕಾಣಬರಲೇ ಇಲ್ಲ.

"ಹುಂ. ಬಿಟರ್ನ್ ಹಕ್ಕಿ ನನಗೆ ಮೋಸ ಮಾಡಿತು. ಹಕ್ಕಿ ಅಲ್ಲಿ ಇಲ್ಲದ ಮೇಲೆ ಜೊಂಡುಗಳ ಮಧ್ಯೆ ಹಾರಿಹೋಗಿ ಏನು ಪ್ರಯೋಜನ? ಬೇರೆ ಯಾವುದಾದರೂ ಹಕ್ಕಿ ಹಿಡಿದರಾಯಿತು" ಎಂದುಕೊಂಡಿತು ನಾಯಿಮರಿ.

ಹಾಗೆಂದುಕೊಂಡು ಅದು ಗುಡ್ಡದ ಬಳಿಗೆ ಓಡಿ ಹೋಗಿ ಸುತ್ತಮುತ್ತ ನೋಡ ತೊಡಗಿತು. ಅಲ್ಲಿ ನೆಲದ ಮೇಲೆ ಒಂದು ಹೂಪಯೆ ಹಕ್ಕಿ ಕುಳಿತಿತ್ತು. ಅದು ತನ್ನ ನೆತ್ತಿಯ ಮೇಲಿನ ಶಿಖೆಯೊಂದಿಗೆ, ಈಗ ಅದನ್ನು ವಿಶಾಲವಾಗಿ ಹರಡುತ್ತ, ಇನ್ನೊಮ್ಮೆ ಭದ್ರವಾಗಿ ಮುಚ್ಚುತ್ತ, ಆಟವಾಡುತ್ತಿದ್ದಿತು.

"ಅಹ್ಹಾ ! ನಾನೀಗ ಈ ಗುಡ್ಡದ ಮೇಲಿನಿಂದ ಅದರ ಮೇಲೆ ಹಾರುತ್ತೇನೆ !" ಎಂದು ಸಂತೋಷದಿಂದ ಅಂದುಕೊಂಡಿತು ನಾಯಿಮರಿ.

ಆದರೆ ಆ ಹೊತ್ತಿಗೆ ಸರಿಯಾಗಿ ಹೂಪಯೆ ಹಕ್ಕಿ ನೆಲದ ಮೇಲೆ ಬಿದ್ದು ತನ್ನ ರೆಕ್ಕೆಗಳನ್ನು ಹರಡಿತು, ಬಾಲವನ್ನು ಬಿಚ್ಚಿತು, ಕೊಕ್ಕನ್ನು ಗಾಳಿಯಲ್ಲಿ ಮೇಲಕ್ಕೆ ಎತ್ತಿಹಿಡಿಯಿತು.

ನಾಯಿಮರಿ ದಿಟ್ಟಿಸಿ ನೋಡಿತು. ಅಲ್ಲಿ ಹಕ್ಕಿ ಇರಲೇ ಇಲ್ಲ. ಬಣ್ಣಬಣ್ಣದ ತುಂಡು ಬಟ್ಟೆಯಷ್ಟೆ ನೆಲದ





ಮೇಲೆ ಹರಡಿದ್ದಿತು. ಅದರ ಮಧ್ಯದಿಂದ ಒಂದು ಬಾಗಿದ ಸೂಜಿ ಎದ್ದು ನಿಂತಿದ್ದಿತು.

ಅದನ್ನು ಕಂಡು ನಾಯಿಮರಿಗೆ ಅತ್ಯಾಶ್ಚರ್ಯವಾಯಿತು. ಇಲ್ಲಿ ಈಗಷ್ಟೆ ಹೂಪಯೆ ಹಕ್ಕಿ ಇತ್ತಲ್ಲ, ಏನಾಯಿತು ಅದಕ್ಕೆ?

"ಈ ಬಣ್ಣಬಣ್ಣದ ಬಟ್ಟೆಯನ್ನೇ ನಾನು ಹಕ್ಕಿ ಅಂತ ಅಂದುಕೊಂಡು ಬಿಟ್ಟೆನೋ ಹೇಗೆ? ಹೋಗಲಿ, ಬೇರೆಲ್ಲಿಗಾದರೂ ಹೋಗಿ ಒಂದು ಪುಟ್ಟ ಹಕ್ಕಿಯನ್ನು ಹಿಡಿಯೋಣ!"

ಅದು ಒಂದು ಮರದ ಬಳಿಗೆ ಓಡಿ ಹೋಯಿತು. ಅಲ್ಲಿ ಕೊಂಬೆಯೊಂದರ ಮೇಲೆ ಒಂದು ಪುಟ್ಟ ಹಕ್ಕಿ ಕುಳಿತಿದ್ದಿತು. ಅದೊಂದು ರೈನಿಕ್ ಹಕ್ಕಿಯಾಗಿತ್ತು.

ನಾಯಿಮರಿ ಅದರತ್ತ ಧಾವಿಸಿಕೊಂಡು ಹೋಯಿತು. ಆದರೆ ಹಕ್ಕಿ ಅಲ್ಲೇ ಇದ್ದ ಮರದ ಪೊಟರೆ ಯೊಳಗೆ ಸೇರಿಕೊಂಡಿತು.

"ಹಹ್ಹಾ... ಇದೀಗ ನನ್ನ ಕೈಗೆ ಬಿದ್ದಂತೆಯೇ" ಎಂದುಕೊಂಡು ನಾಯಿಮರಿ ತನ್ನ ಹಿಂಗಾಲುಗಳ ಮೇಲೆ ನಿಂತು ಪೊಟರೆಯೊಳಕ್ಕೆ ಇಣಿಕಿ ನೋಡಿತು. ಅಲ್ಲಿ ಆ ಕತ್ತಲ ಪೊಟರೆಯಲ್ಲಿ ಒಂದು ಕಪ್ಪು ಹಾವು ನುಲು ಚಾಡುತ್ತ ಭಯಂಕರವಾಗಿ ಭುಸುಗುಟ್ಟಿತು.

ನಾಯಿಮರಿ ಹೆದರಿ ಹಿಂದಕ್ಕೆ ಚಿಮ್ಮಿತು. ಅದರ ಮೈ ಮೇಲೆ ಕೂದಲು ನಿಮಿರಿ ನಿಂತಿತು. ಅದು ಓಟ ಕಿತ್ತಿತು. ಭುಸುಗುಟ್ಟಿದ್ದು ಹಾವೇನೂ ಆಗಿರಲಿಲ್ಲ. ರೈನಿಕ್ ಹಕ್ಕಿಯೇ ಪೊಟರೆಯೊಳಗಿನಿಂದ ಹಾಗೆ ಭುಸು

ಗುಟ್ಟಿತ್ತು. ಅದು ತನ್ನ ತಲೆಯನ್ನು ನುಲುಚಿಕೊಂಡಿತ್ತು. ಬೆನ್ನಿನ ಉದ್ದಕ್ಕೂ ಹಾವಿನಂತೆ ಕಪ್ಪು ಪುಕ್ಕಗಳ ಒಂದು ಪಟ್ಟಿಯನ್ನು ಸುತ್ತಿಕೊಂಡಿದ್ದಿತು.

"ಅಬ್ಬಾ ! ಎಷ್ಟು ಹೆದರಿಕೆಯಾಗಿ ಬಿಟ್ಟಿತು ! ಕಾಲೇ ಬಿದ್ದು ಹೋಗುವಂತೆ ಆಗಿ ಬಿಟ್ಟಿತ್ತಲ್ಲ ! ಸದ್ಯಕ್ಕೆ ಹೇಗೋ ಬಚಾವಾದೆ. ಇನ್ನು ನಾನು ಈ ಹಕ್ಕಿಗಳನ್ನು ಹಿಡಿಯೋಕೆ ಹೋಗೊಲ್ಲ. ಹಲ್ಲಿಯನ್ನು ಹಿಡಿಯಲು ಆಗುತ್ತದಾ ನೋಡುತ್ತೇನೆ."

ಹಲ್ಲಿಯೊಂದು ಬಂಡೆಯ ಮೇಲೆ ಕುಳಿತಿತ್ತು. ಅದರ ಕಣ್ಣುಗಳು ಮುಚ್ಚಿದ್ದವು. ಅದು ಬಿಸಿಲಿನಲ್ಲಿ ಮೈ ಕಾಯಿಸಿಕೊಳ್ಳುತ್ತಿತ್ತು.

ನಾಯಿಮರಿ ಸದ್ದಿಲ್ಲದೆ ಅದರ ಬಳಿಗೆ ಹೋಯಿತು. ಆಮೇಲೆ ಹಾರಿ ಅದರ ಬಾಲವನ್ನು ಕಚ್ಚಿ ಹಿಡಿಯಿತು.

ಹಲ್ಲಿ ಬಲವಾಗಿ ಜಗ್ಗಿತು. ಬಾಲ ಕತ್ತರಿಸಿತು. ಬಾಲವನ್ನು ನಾಯಿಮರಿಯ ಹಲ್ಲುಗಳ ಮಧ್ಯೆಯೇ ಬಿಟ್ಟುಕೊಟ್ಟು ಹಲ್ಲಿ ಬಂಡೆಯ ಕೆಳಕ್ಕೆ ನುಸುಳಿಕೊಂಡು ಹೋಯಿತು.

ಕಡಿದು ಹೋದ ಬಾಲವು ನಾಯಿಮರಿಯ ಹಲ್ಲುಗಳ ಮಧ್ಯೆ ನುಲಿದಾಡುತ್ತಿತ್ತು.

ನಾಯಿಮರಿ ಗುಟುರು ಹಾಕಿತು. ಬಾಲವನ್ನು ಉಗುಳಿ ಹಲ್ಲಿಯ ಕಡೆಗೆ ಧಾವಿಸಿತು. ಆದರೆ ಎಲ್ಲಿ ಹೋಯಿತು ಅದು ? ಅದು ದೀರ್ಘ ಕಾಲ ಶಾಂತವಾಗಿ ಬಂಡೆಯ ಕೆಳಗೇ ಕುಳಿತಿದ್ದಿತು. ಅದು ಒಂದು ಹೊಸ ಬಾಲವನ್ನು ಬೆಳೆಸಿಕೊಳ್ಳುತ್ತಿದ್ದಿತು.

"ಸರಿ. ಈ ಹಲ್ಲಿ ತಪ್ಪಿಸಿಕೊಂಡಿತು ಅಂತ ಕಾಣುತ್ತೆ. ಹೋಗಲಿ ಯಾವುದಾದರೂ ಕ್ರಿಮಿ ಕೀಟಗಳನ್ನಾದರೂ ಹಿಡಿಯೋಣ" ಎಂದುಕೊಂಡಿತು ನಾಯಿಮರಿ.

ಸುತ್ತ ನೋಡಿತು. ಜೀರುಂಡೆಗಳು ನೆಲದ ಮೇಲೆ ಹರಿದಾಡುತ್ತಿದ್ದವು. ಹುಲ್ಲಿನ ಮಧ್ಯೆ ಮಿಡತೆಗಳು ಕುಣಿದಾಡುತ್ತಿದ್ದವು. ಮರಗಳ ಕೊಂಬೆಗಳಲ್ಲಿ ಕಂಬಳಿ ಹುಳುಗಳು ತೆವಳಿಕೊಂಡು ಹೋಗುತ್ತಿದ್ದವು. ಗಾಳಿಯಲ್ಲಿ ಚಿಟ್ಟೆಗಳು ಹಾರಾಡುತ್ತಿದ್ದವು.

ನಾಯಿಮರಿ ಅವುಗಳನ್ನು ಹಿಡಿಯಲು ಅಟ್ಟಿಸಿಕೊಂಡು ಹೋಯಿತು. ಆದರೆ ಇದ್ದಕ್ಕಿದ್ದಂತೆ ಅದರ ಸುತ್ತಲ





ದೃಶ್ಯ ಬದಲಿತು. ಅದೊಂದು ವಿಶೇಷ ಚಿತ್ರದಂತಿತ್ತು. ಎಲ್ಲವೂ ಅಲ್ಲಿಯೇ ಇದ್ದವು. ಆದರೆ ಯಾವುವೂ ನಾಯಿಮರಿಗೆ ಕಾಣುತ್ತಿರಲಿಲ್ಲ. ಎಲ್ಲ ಅಡಗಿಕೊಂಡು ಬಿಟ್ಟಿದ್ದವು.

ಹಸಿರು ಮಿಡತೆಗಳು ಹಸಿರು ಹುಲ್ಲಿನ ಮಧ್ಯೆ ಅಡಗಿಕೊಂಡವು.

ಕಂಬಳಿ ಹುಳುಗಳು ಕೊಂಬೆಗಳ ಉದ್ದಕ್ಕೂ ಮೈ ಚಾಚಿ ನಿಶ್ಚಲವಾಗಿ ಮಲಗಿದ್ದವು. ಅವನ್ನು ಮರದ ಕೊಂಬೆಗಳಿಂದ ಪ್ರತ್ಯೇಕಿಸಿ ಹೇಳುವುದೇ ಕಷ್ಟವಾಗಿತ್ತು.

ಚಿಟ್ಟೆಗಳು ರೆಕ್ಕೆಗಳನ್ನು ಮಡಿಸಿಕೊಂಡು ಮರಗಳ ಮೇಲೆ ಹೋಗಿ ಕುಳಿತಿದ್ದವು. ಆ ಮರಗಳ ತೊಗಟೆ ಯಾವುದು, ಎಲೆಗಳು ಯಾವುವು ಮತ್ತು ಚಿಟ್ಟೆಗಳು ಯಾವುವು ಎಂದು ಪ್ರತ್ಯೇಕಿಸಿ ಹೇಳುವುದೇ ಸಾಧ್ಯವಿರಲಿಲ್ಲ.

ಪುಟ್ಟ ಜೀರುಂಡೆ ಮರಿಯಷ್ಟೇ ನೆಲದ ಮೇಲೆ ತೆವಳಿಕೊಂಡು ಹೋಗುತ್ತಿತ್ತು. ಅದು ಅಡಗಿಕೊಂಡಿರಲಿಲ್ಲ.

ನಾಯಿಮರಿ ಅದನ್ನು ಅಟ್ಟಿಸಿಕೊಂಡು ಹೋಯಿತು. ಅದು ಇನ್ನೇನು ಜೀರುಂಡೆಯನ್ನು ಹಿಡಿಯಲಿದ್ದಿತು, ಆಗ ಜೀರುಂಡೆ ತಕ್ಷಣವೇ ನಿಂತು ನಾಯಿಮರಿಯ ಕಡೆಗೆ ತಿರುಗಿ ಅದರ ಮೇಲೆ ತನ್ನ ಬಾಯಿಯಿಂದ ಉಗುಳಿನ ಧಾರೆಯನ್ನು ಬಾಣದಂತೆ ಎಸೆಯಿತು. ಅದು ನೇರವಾಗಿ ಹೋಗಿ ನಾಯಿಮರಿಯ ಮೂಗಿಗೇ ಬಡಿಯಿತು !

ನಾಯಿಮರಿ ನೋವಿನಿಂದ ಗೋಳುಗುಟ್ಟುತ್ತ ಹಿಂದಿರುಗಿತು. ಬಾಲವನ್ನು ಕಾಲುಗಳ ಮಧ್ಯೆ ಸೇರಿಸಿಕೊಂಡು ಓಡಿತು. ಹುಲ್ಲುಗಾವಲನ್ನು ದಾಟಿ ಗೇಟಿನ ಕೆಳಗೆ ತೂರಿಕೊಂಡು ತನ್ನ ಗೂಡಿಗೆ ಹಿಂದಿರುಗಿತು.

ಅದು ತನ್ನ ಗೂಡಿನಲ್ಲೇ ತುಂಬ ತುಂಬ ಕಾಲ ಅಡಗಿಕೊಂಡು ಕುಳಿತಿದ್ದಿತು. ಮೂಗು ಹೊರಗೆ ಹಾಕಲೂ ಅದಕ್ಕೆ ತುಂಬ ಹೆದರಿಕೆಯಾಗಿತ್ತು.

ಆದರೆ ಕಾಡು ಪ್ರಾಣಿಗಳೂ ಹಕ್ಕಿಗಳೂ ಕೀಟಗಳೂ ಮತ್ತೆ ಎಂದಿನಂತೆ ತಮ್ಮ ಕಾರ್ಯ ನಡೆಸಿಕೊಂಡು ಹೋಗುತ್ತಿದ್ದವು – ಒಂದೊಂದೂ ತನ್ನದೇ ರೀತಿಯಲ್ಲಿ.



